# ಕುರ್‌ಆನಿನಲ್ಲಿ ಕಾರುಣ್ಯದ ವಚನಗಳು

✍ ಅಬ್ದುಲ್ ಸಲಾಮ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಭೂಮ್ಯಾಕಾಶಗಳನ್ನು ಸೃಷ್ಟಿಸಿ ಪರಿಪಾಲಿಸುವ ಅಲ್ಲಾಹನು ಪರಮ ದಯಾಮಯನೂ ಕಾರುಣ್ಯವಂತನೂ ಆಗಿದ್ದಾನೆ. ಈ ಲೋಕದಲ್ಲಿ ಸಕಲ ವಸ್ತುಗಳನ್ನೂ ಮನುಷ್ಯರಿಗಾಗಿ ಸೃಷ್ಟಿಸಿದ್ದಾನೆ. ಅವನ ಎಲ್ಲ ಅಗತ್ಯಗಳನ್ನೂ ಪೂರೈಸುವ ವ್ಯವಸ್ಥೆ ಮಾಡಿದ್ದಾನೆ. ಮನುಷ್ಯನಿಗೆ ಬುದ್ಧಿ-ವಿವೇಕ ನೀಡಿ ಅವನನ್ನು ಓರ್ವ ಹೊಣೆಗಾರನನ್ನಾಗಿ ಮಾಡಿದ್ದಾನೆ. ಇದೆಲ್ಲವೂ ಅವನ ಕಾರುಣ್ಯದ ಫಲವಾಗಿರುತ್ತದೆ. ಇಲ್ಲಿ ಬದುಕು ಹಸನಾಗುವಂತಹ ಅತ್ಯುತ್ತಮ ವಾತಾವರಣವನ್ನುಂಟು ಮಾಡಿರುವನು. ಎಲ್ಲ ವಸ್ತುಗಳನ್ನೂ ಮಾನವನಿಗೆ ಅಧೀನಗೊಳಿಸಿದನು.

ಮಾನವನ ಎಲ್ಲ ಭೌತಿಕ ಅಗತ್ಯಗಳನ್ನೂ ಪೂರೈಸಿದ ಅಲ್ಲಾಹನು ಅವನಿಗೆ ಜೀವನ ಸಾಗಿಸುವ ನೇರ ಮಾರ್ಗವನ್ನು ತೋರಿಸುವ ಕುರಿತು ಅಲಕ್ಷ್ಯನಾಗಿಲ್ಲ. ಮನುಷ್ಯನಿಗೆ ಅತ್ಯುತ್ತಮವಾದ ಒಂದು ಸನ್ಮಾರ್ಗವನ್ನು ನೀಡುವ ವ್ಯವಸ್ಥೆಯನ್ನು ಮಾಡಿದನು. ಅದಕ್ಕಾಗಿ ಇತಿಹಾಸದುದ್ದಕ್ಕೂ ಅವನು ಪ್ರವಾದಿಗಳನ್ನು ಕಳಿಸಿ ದಾರಿತಪ್ಪುತ್ತಿರುವ ಮನುಷ್ಯರನ್ನು ತನ್ನ ಸನ್ಮಾರ್ಗದ ಕಡೆಗೆ ಕರೆಯುವ ಏರ್ಪಾಡು ಮಾಡಿದನು. ಅದರಂತೆ ನಡೆದರೆ ಈ ಲೋಕದಲ್ಲಿ ನೆಮ್ಮದಿಯ ಬದುಕು ಹಾಗೂ ಪರಲೋಕದಲ್ಲಿ ಅಲ್ಲಾಹನ ಸಂಪ್ರೀತಿ ಮತ್ತು ಶಾಶ್ವತ ಸ್ವರ್ಗದ ಭರವಸೆಯನ್ನು ನೀಡಲಾಗುವುದೆಂಬ ವಾಗ್ದಾನ ಮಾಡಿರುವನು. ಅದಕ್ಕೆ ವ್ಯತಿರಿಕ್ತವಾಗಿ ನಡೆಯುವವರಿಗೆ ಕಠಿಣ ಹಾಗೂ ಶಾಶ್ವತ ನರಕಾಗ್ನಿಯ ಶಿಕ್ಷೆಯ ಎಚ್ಚರಿಕೆಯನ್ನೂ ನೀಡಿರುವನು.

ಅಲ್ಲಾಹನ ಇಷ್ಟ ಧರ್ಮವಾದ ಇಸ್ಲಾಮ್ ಕಾರುಣ್ಯದ ಧರ್ಮವಾಗಿದೆ. ಅದರ ಆದೇಶ-ನಿರ್ದೇಶಗಳು, ವಿಧಿ-ನಿಷೇಧಗಳು ಮನುಷ್ಯನ ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ಶಾಂತಿ-ನೆಮ್ಮದಿಯನ್ನು ಉಂಟು ಮಾಡುತ್ತದೆ. ಅದರಿಂದ ಒಂದು ಅತ್ಯುತ್ತಮ ನಾಗರಿಕ ಸಮಾಜ ಅಸ್ತಿತ್ವಕ್ಕೆ ಬರುತ್ತದೆ. ಕರುಣಾ ಸಾಗರನಾದ ಅಲ್ಲಾಹನು ತನ್ನ ದಿವ್ಯಗ್ರಂಥ (ಕುರ್‌ಆನ್)ದಲ್ಲಿ ಕರುಣೆಯ ಹೊಳೆಯನ್ನೇ ಹರಿಸುವಂತಹ ಆದೇಶ-ನಿರ್ದೇಶಗಳನ್ನು ನೀಡಿದ್ದಾನೆ.

'ಕುರ್‌ಆನಿನಲ್ಲಿ ಕಾರುಣ್ಯದ ವಚನಗಳು' ಎಂಬ ಈ ಕೃತಿಯಲ್ಲಿ ಅಲ್ಲಾಹನ ಕರುಣೆಯನ್ನು ಬಿಂಬಿಸುವಂತಹ ಸೂಕ್ತಗಳನ್ನು ಆಯ್ದು ಕ್ರೋಢೀಕರಿಸಲಾಗಿದೆ. ಇದರ ಅಧ್ಯಯನವು ಅತ್ಯುತ್ತಮ ಜೀವನಕ್ಕೆ ಮಾರ್ಗದರ್ಶಿಯಾಗಲೆಂದು ಹಾರೈಸುತ್ತೇವೆ.

-ಶಾಂತಿ ಪ್ರಕಾಶನ

# ಮುನ್ನುಡಿ

ಕುರ್‌ಆನ್... ಭೂಮ್ಯಾಕಾಶಗಳು ಮತ್ತು ಅದರಲ್ಲಿರುವ ಸಕಲ ಜೀವಜಾಲಗಳನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ ಜಗದೊಡೆಯನು ದೇವಚರರ ಮೂಲಕ ಮಾನವರಿಗೆ ನೀಡಿದ ವಿಚಾರಶಾಸ್ತ್ರ(Ideology) ಹಾಗೂ ಮನೋಹರವಾದ ದೈವಿಕ ದರ್ಶನವಾಗಿದೆ. ಅದು ಭೂಮಿ ಹಾಗೂ ಆಕಾಶಗಳನ್ನು ಅದ್ಭುತ ರೀತಿಯಲ್ಲಿ ಒಟ್ಟು ಗೂಡಿಸಿತು. ಈ ಸಮನ್ವಯ ದರ್ಶನದ ಸೌಂದರ್ಯವನ್ನು ಅರ್ಥೈಸಲು ''ಓ ನಮ್ಮ ಪ್ರಭೂ ನಮಗೆ ಇಹಲೋಕದಲ್ಲಿ ಒಳಿತನ್ನು ದಯಪಾಲಿಸು ಮತ್ತು ಪರಲೋಕದಲ್ಲಿಯೂ ಒಳಿತನ್ನು ದಯಪಾಲಿಸು'' ಎಂಬ ಪ್ರಾರ್ಥನೆ ಮಾತ್ರ ಸಾಕು. ಅದು ಸಂಪೂರ್ಣವಾಗಿದೆ, ಪ್ರಾಯೋಗಿಕವಾಗಿದೆ. ಮೈಗೂಡಿಸಿಕೊಳ್ಳಲು ಅರ್ಹವಾದ ಸಾರ್ವಭೌಮ ಹಾಗೂ ಸಾರ್ವತ್ರಿಕ ಲೌಕಿಕವಾದ ವಿಚಾರಶಾಸ್ತ್ರವಾಗಿದೆ.

ಆದರೆ ಜಾಗತಿಕ ಮಟ್ಟದಲ್ಲಿ ಇದರ ಪಾವಿತ್ರ್ಯತೆಯನ್ನು ಮಲಿನಗೊಳಿಸಲು ಪ್ರಯತ್ನಿಸುತ್ತಿದ್ದಾರೆ. ಇದರ ಜ್ಯೋತಿಯನ್ನು ನಂದಿಸಲು ಹವಣಿಸುತ್ತಿದ್ದಾರೆ. ಆದರೆ ಅಲ್ಲಾಹನು ಮಾತ್ರ ಈ ಸಾಮ್ರಾಜ್ಯಶಾಹಿಗಳ ತಂತ್ರಗಳನ್ನು ಯಾವ ರೀತಿ ವಿಫಲಗೊಳಿಸುತ್ತಾನೆ ಎಂದು ಅಲ್ಲಾಹನೇ ವಿವರಿಸುತ್ತಾನೆ. **''ಇವರು ಅಲ್ಲಾಹನ ಜ್ಯೋತಿಯನ್ನು ತಮ್ಮ ಬಾಯಿಯಿಂದ ಊದಿ ನಂದಿಸಲಿಚ್ಛಿಸುತ್ತಾರೆ ಮತ್ತು ಅಲ್ಲಾಹನು ತನ್ನ ಜ್ಯೋತಿಯನ್ನು ಸಂಪೂರ್ಣವಾಗಿ ಹಬ್ಬಿಸಿಯೇ ತೀರಲು ನಿರ್ಧರಿಸಿದ್ದಾನೆ. ಇದು ಸತ್ಯನಿಷೇಧಿಗಳಿಗೆ ಎಷ್ಟೇ ಅಪ್ರಿಯವಾಗಿದ್ದರೂ ಸರಿಯೇ.''**

**(ಪವಿತ್ರ ಕುರ್‌ಆನ್, 61:8)**

ಇಸ್ಲಾಮಿನ ಬೆಳಕು ವ್ಯಾಪಿಸದಂತೆ ತಡೆಗಟ್ಟಲು ಸಾಮ್ರಾಜ್ಯಶಾಹಿಗಳು ಅವಿಶ್ರಾಂತ ಪರಿಶ್ರಮ ಪಡುತ್ತಿದೆ, ಅದಕ್ಕಾಗಿ ಮುಸ್ಲಿಮರನ್ನೇ ಆಯ್ದು ತಮ್ಮ ಬೇಳೆ ಬೇಯಿಸಲು ಸಜ್ಜಾಗಿದ್ದಾರೆ. ಆದ್ದರಿಂದಲೇ ಜಿಹಾದ್, ಪರ್ದಾ ಮುಂತಾದ ಧಾರ್ಮಿಕ ಚೌಕಟ್ಟಿನೊಳಗಿರಬೇಕಾದ ವಿಷಯಗಳು ತನ್ನ ಪಾವಿತ್ರ್ಯತೆಯನ್ನು ಕಳೆದುಕೊಂಡಿದೆ. ಇಸ್ಲಾಮ್ ಧರ್ಮವು ಖಡ್ಗದಿಂದ ಹರಡಿತು ಹಾಗೂ ಮುಸ್ಲಿಮರೆಲ್ಲರೂ ಭಯೋತ್ಪಾದಕರು, ಜಿಹಾದಿಗಳು, ಸಮಾಜಘಾತುಕರು ಎಂದು ಪ್ರಚುರಪಡಿಸಿ ಕೆಲವೊಂದು ನಾಮಧಾರೀ ಮುಸ್ಲಿಮರು ಮಾಡುವ ತಪ್ಪನ್ನು ಇಡೀ ಮುಸ್ಲಿಮ್ ಸಮಾಜದ ಮೇಲೆ ಹೊರಿಸುವ ಹೀನಾಯ ಕೆಲಸವು ಕೆಲವು ನಿಜವಾದ ಸಮಾಜಘಾತುಕರಿಂದ ನಿರಂತರವಾಗಿ ನಡೆಯುತ್ತಾ ಬಂದಿದೆ. ಅದೇ ರೀತಿ ಪರ್ದಾವೆಂಬ ಮುಸ್ಲಿಮ್ ಸ್ತ್ರೀಯ ಐಡೆಂಟಿಟಿಯನ್ನು ಸದಾ ಚರ್ಚೆಯಾಗುವಂತೆ ನೋಡಿಕೊಳ್ಳುತ್ತಿರುವುದು ದುಷ್ಟ ಶಕ್ತಿಗಳ ಗೂಢತಂತ್ರವಾಗಿದೆ.

ಇಸ್ಲಾಮ್ ಧರ್ಮವು ಕಾರುಣ್ಯವಾಗಿದೆ. ಅದರಲ್ಲಿ ವಿಶಾಲತೆಯಿದೆ, ಅದು ಕತ್ತಲೆಯಲ್ಲಿ ಹುಡುಕುವವನಿಗೆ ಬೆಳಕಾಗಿದೆ, ಅದು ಶಾಂತಿ ಮತ್ತು ಸಮಾಧಾನವಾಗಿದೆ, ಆಧುನಿಕ ಜಗತ್ತಿನ ಎಲ್ಲ ಸಮಸ್ಯೆಗಳಿಗೆ ಅದರಲ್ಲಿ ಪರಿಹಾರವಿದೆ. ಅದು ಅಕ್ರಮವನ್ನು ದ್ವೇಷಿಸುತ್ತದೆ. ಭಯೋತ್ಪಾದನೆಯನ್ನು ಖಂಡಿಸುತ್ತದೆ. ಅದರ ಬುನಾದಿ ಪ್ರೀತಿ ಮತ್ತು ವಾತ್ಸಲ್ಯವಾಗಿದೆ. ಇಸ್ಲಾಮಿನ ಮೆನಿಫೆಸ್ಟೋ ಪವಿತ್ರ ಕುರ್‌ಆನ್ ಆಗಿದೆ. ಪವಿತ್ರ ಕುರ್‌ಆನಿನ 114 ಅಧ್ಯಾಯಗಳಲ್ಲಿ 113 ಪ್ರಾರಂಭವಾಗುವುದು ಕಾರುಣ್ಯವನ್ನು ಉಚ್ಚರಿಸುವ ಮೂಲಕವಾಗಿದೆ. ಅಲ್ಲಾಹನ 99 ನಾಮಗಳಲ್ಲಿಕುರ್‌ಆನ್ ಅತಿ ಹೆಚ್ಚುಪ್ರಯೋಗಿಸಿದ 2 ನಾಮಗಳು ಅದು 'ದಯಾಮಯ' ಮತ್ತು 'ಕರುಣಾಳು' ಎಂಬುದಾಗಿದೆ. ಅಲ್ಲಾಹನ ಪ್ರಶಂಶೆಯಲ್ಲಿ 'ರಹ್ಮಾನ್(ಪರಮ ದಯಾಳು) ಎಂಬ ಪದವನ್ನು ಉಪಯೋಗಿಸಿದ ಬಳಿಕ ಪುನಃ ಅದೇ ಅರ್ಥ ಕೊಡುವ 'ರಹೀಮ್' (ಕರುಣಾಳು) ಎಂಬ ಪದವನ್ನು ಸೇರಿಸಿರುವುದು ಅವನ ಕೃಪೆಯ ಅಪಾರ ವೈಶಾಲ್ಯವನ್ನು ತೋರಿಸಲಿಕ್ಕಾಗಿದೆ. ಇದನ್ನು ಅಲ್ಲಾಹನ ವಚನದಿಂದ ಈ ರೀತಿ ತಿಳಿಯಬಹುದು. **''ಓ ಪೈಗಂಬರರೇ, ಇವರೊಡನೆ ಹೇಳಿರಿ! 'ಅಲ್ಲಾಹ್ ಎಂದು ಕರೆಯಿರಿ ಅಥವಾ ಪರಮ ದಯಾಮಯ ಎಂದು ಕರೆಯಿರಿ' ಯಾವ ಹೆಸರಿಂದ ಕರೆದರೂ ಅವನಿಗೆ ಎಲ್ಲವೂ ಒಳ್ಳೆಯ ನಾಮಗಳೇ ಇವೆ ಮತ್ತು ನಿಮ್ಮ ನಮಾಝನ್ನು ಬಹಳ ಉಚ್ಚ ಸ್ವರದಲ್ಲಾಗಲಿ ತೀರಾ ಮೆಲುದನಿಯಲ್ಲಾಗಲಿ ನಿರ್ವಹಿಸಬೇಡಿರಿ. ಇವೆರಡರ ನಡುವೆ ಮಧ್ಯಮ ತರದ ಧ್ವನಿಯನ್ನಿರಿಸಿಕೊಳ್ಳಿರಿ.''(ಪವಿತ್ರ ಕುರ್‌ಆನ್, 17: 110)**

ಪವಿತ್ರ ಕುರ್‌ಆನ್ ಒಂದು ಮಹಾ ಸಾಗರದಂತೆ, ಅಕ್ಷರ ಜ್ಞಾನವಿಲ್ಲದವರು ಚಿಕ್ಕಮಕ್ಕಳಂತೆ, ಅದರ ತೀರದಿಂದ ಕಲ್ಲುಗಳು ಹಾಗೂ ಚಿಪ್ಪುಗಳನ್ನು ಸಂಗ್ರಹಿಸುವರು. ವಿದ್ವಾಂಸರು ಮತ್ತು ಚಿಂತಕರು ನಾನಾ ವಿಧದ ಮುತ್ತು ಹಾಗೂ ರತ್ನಗಳ ಹಾಗೆ, ಬದುಕನ್ನು ರೂಪುಗೊಳಿಸಲು ಸಾಧ್ಯವಾಗುವಂತಹ ತತ್ವಶಾಸ್ತ್ರದಿಂದ ಕೂಡಿದ, ಬುದ್ಧಿವಂತಿಕೆಯ ಹಾಗೂ ವಿವೇಕಪೂರ್ಣವಾದ ನಿಯಮಗಳನ್ನು ಹೊರತರುವರು.

ಕುರ್‌ಆನ್ ಉನ್ನತ ಸಾಹಿತ್ಯದಿಂದ ಕೂಡಿದ ದೈವಿಕ ಗ್ರಂಥವಾಗಿದೆ. ಅಲ್ಲಾಹನು ಗತ ಪ್ರವಾದಿಗಳಿಗೆ ಅವತೀರ್ಣಗೊಳಿಸಿದ್ದಂತಹ ದೈವಿಕಗ್ರಂಥಗಳು ಕಾಲಕ್ರಮೇಣ ಮಾನವನ ಹಸ್ತಕ್ಷೇಪಕ್ಕೆ ತುತ್ತಾಗಿ ಅದು ವಿಕೃತಗೊಂಡಾಗ, ಅಲ್ಲಾಹನು ಕೊನೆಯ ದೈವಿಕಗ್ರಂಥವೆಂಬ ರೂಪದಲ್ಲಿ ಪವಿತ್ರ ಕುರ್‌ಆನನ್ನು ಅವತೀರ್ಣಗೊಳಿಸಿದನು. ಅದು 1400 ವರ್ಷಗಳಿಂದಲೂ ಯಾವುದೇ ಬದಲಾವಣೆಗೆ ಈಡಾಗದೆ, ಯಾವುದೇ ಮಾನವನ ಹಸ್ತಕ್ಷೇಪಕ್ಕೆ ಒಳಗಾಗದೆ ಶೇಕಡ 100 ರಷ್ಟು ಅದರ ಮೂಲರೂಪದಲ್ಲೇ ಇಂದು ಕೂಡ ಲಭ್ಯವಿದೆ. ಅದಕ್ಕೆ ಕಾರಣ ಅದರ ಸಂರಕ್ಷಣೆಯ ವಾಗ್ದಾನವನ್ನು ಅಲ್ಲಾಹನೇ ಮಾಡಿದ್ದಾನೆ. **''ಈ 'ಉಪದೇಶ'ವನ್ನು ನಿಶ್ಚಯವಾಗಿಯೂ ನಾವು ಅವತೀರ್ಣಗೊಳಿಸಿರುತ್ತೇವೆ ಮತ್ತು ಸ್ವತಃ ನಾವೇ ಅದರ ರಕ್ಷಕರೂ ಆಗಿರುತ್ತೇವೆ.''**

**(ಪವಿತ್ರ ಕುರ್‌ಆನ್,15: 9)**

ಆಧುನಿಕ ಮಾನವನು ವಿಜ್ಞಾನ ಮತ್ತು ತಂತ್ರಜ್ಞಾನದ ಸಹಾಯದಿಂದ ಹಲವು ಅದ್ಭುತಗಳನ್ನು ಮಾಡಿ ಬೀಗುತ್ತಿದ್ದರೂ ಮನಶ್ಶಾಂತಿಗಾಗಿ ಅಲೆದಾಡುತ್ತಾ ಕೊನೆಗೆ ಪವಿತ್ರ ಕುರ್‌ಆನಿನ ಮೊರೆ ಹೋಗುವುದು ಕುರ್‌ಆನಿನ ಪಾವಿತ್ರ್ಯತೆ ಹಾಗೂ ಅದರ ಪವಾಡವನ್ನು ಇನ್ನಷ್ಟು ಎತ್ತಿ ತೋರಿಸುತ್ತದೆ. 1400 ವರ್ಷಗಳ ಹಿಂದೆ ಅವತೀರ್ಣವಾಗಿ ಕೋಟಿಗಟ್ಟಲೆ ಜನಮಾನಸದಲ್ಲಿ ಅಲೆಯನ್ನು ಸೃಷ್ಟಿಸಿದ ಪವಿತ್ರ ಕುರ್‌ಆನ್ ಒಂದು ಜೀವಂತ ಅದ್ಭುತವಾಗಿದೆ. ಆದರೆ ಈ ಕಾರುಣ್ಯ ಗ್ರಂಥವನ್ನು ಇಸ್ಲಾಮಿನ ಶತ್ರುಗಳು ಮಾತ್ರ ಕುರ್‌ಆನ್ ಭಯೋತ್ಪಾದನೆಯ ಪ್ರತೀಕವಾಗಿ, ವಿನಾಶದ ಆಟಿಕೆಯಾಗಿ ಪರಿಚಯಿಸುತ್ತಾ ಇದ್ದಾರೆ. ಭಯೋತ್ಪಾದನೆಯ ವಿಷ ಬೀಜ ಕಾರುವ ಗ್ರಂಥವಾಗಿದೆ ಎಂದೂ ಅದು ವಿಶ್ವಕ್ಕೆ ಮಾರಕವಾಗಿದೆಯೆಂದೂ ಅದನ್ನು ನಾಶ ಪಡಿಸಬೇಕೆಂದೂ ಶತ್ರುಗಳು ಎಲ್ಲ ವಿಧದ ಕುತಂತ್ರಗಳನ್ನು ಉಪಯೋಗಿಸಿ ಪ್ರಚುರಪಡಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ನಿಜವಾದ ವಾಸ್ತವಿಕತೆಯನ್ನು ಜನರ ಮುಂದೆ ಇಟ್ಟು ಜನರಿಗೆ ಮನದಟ್ಟು ಮಾಡಿಸುವ ಒಂದು ಚಿಕ್ಕ ಪ್ರಯತ್ನವಾಗಿದೆ ಈ ಕೃತಿ. ಪವಿತ್ರ ಕುರ್‌ಆನಿನಲ್ಲಿರುವ ಸಂಪೂರ್ಣ ಕಾರುಣ್ಯ ವಚನಗಳನ್ನು ಇದರಲ್ಲಿ ಅಳವಡಿಸಲು ಸಾಧ್ಯವಾಗಿಲ್ಲದಿದ್ದರೂ ಪ್ರಮುಖವಾದವುಗಳನ್ನು ಆಯ್ದು ಅದರ ವಿವರಣೆ ಸಮೇತ ಇಲ್ಲಿ ಕೊಡಲಾಗಿದೆ. ಕುಂದು ಕೊರತೆಗಳನ್ನು ಬೆಟ್ಟುಮಾಡಿ ತೋರಿಸಬೇಕೆಂದು ಅಪೇಕ್ಷಿಸುವುದರ ಜೊತೆಗೆ ತಪ್ಪುಗಳು ಸಂಭವಿಸಿದ್ದರೆ ಅಲ್ಲಾಹನು ಕ್ಷಮಿಸಲಿ ಎಂದು ಸರ್ವಶಕ್ತನಾದ ಅಲ್ಲಾಹನೊಂದಿಗೆ ಪ್ರಾರ್ಥಿಸುತ್ತಾ ಈ ಚಿಕ್ಕ ಕೃತಿಯನ್ನು ಒಳಿತನ್ನು ಇಷ್ಟ ಪಡುವ ಹೃದಯಗಳ ಮುಂದೆ ಸಮರ್ಪಿಸುತ್ತಿದ್ದೇನೆ.

-ಅಬ್ದುಸ್ಸಲಾಮ್

“(ಸಂದೇಶವಾಹಕರೇ, ನನ್ನ ಪರವಾಗಿ) ಹೇಳಿರಿ; ತಮ್ಮ ಮೇಲೆ ಅತಿರೇಕವೆಸಗಿಕೊಂಡಿರುವ ನನ್ನ ದಾಸರೇ, ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಅವನಂತೂ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.”

(ಪವಿತ್ರ ಕುರ್‌ಆನ್, 39:53)

# ಅನುಕ್ರಮಣಿಕೆ

# 1. ಕುರ್‌ಆನ್

''ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ.''

(ಪವಿತ್ರ ಕುರ್‌ಆನ್,1:1)

''ಇದು (ದೈವಿಕ) ಗ್ರಂಥ; ಸಂದೇಹಾತೀತವಿದು.[1] ಭಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ.[2]'' (ಪವಿತ್ರ ಕುರ್‌ಆನ್,2:2)

''ಪರೋಕ್ಷದ' ಮೇಲೆ ವಿಶ್ವಾಸವಿರಿಸುವವರಿಗೆ, ನಮಾಝನ್ನು ಸಂಸ್ಥಾಪಿಸುವವರಿಗೆ, ನಾವು ನೀಡಿರುವ ಸಂಪತ್ಸೌಕರ್ಯಗಳಿಂದ ವ್ಯಯಿಸುವವರಿಗೆ.[4]'' (ಪವಿತ್ರ ಕುರ್‌ಆನ್,2:3)

''ಇವರೇನು ಕುರ್‌ಆನಿನ ಬಗ್ಗೆ ಚಿಂತನೆ ನಡೆಸುವುದಿಲ್ಲವೇ? ಇದು ಅಲ್ಲಾಹನ ಹೊರತು ಇನ್ನಾರ ಕಡೆಯಿಂದಾದರೂ ಆಗಿರುತ್ತಿದ್ದರೆ ಇದರಲ್ಲಿ ಅನೇಕ ವಿರೋಧಾಭಾಸಗಳು ಕಂಡು ಬರುತ್ತಿದ್ದುವು.[5]'' (ಪವಿತ್ರ ಕುರ್‌ಆನ್,4:82)

''ವಾಸ್ತವದಲ್ಲಿ ಈ ಕುರ್‌ಆನ್ ಅತ್ಯಂತ ನೇರ ಮಾರ್ಗವನ್ನು ತೋರಿಸಿ ಕೊಡುತ್ತದೆ. ಇದನ್ನು ಸ್ವೀಕರಿಸಿಕೊಂಡು ಸತ್ಕರ್ಮವೆಸಗಿದವರಿಗೆ ದೊಡ್ಡ ಸತ್ಫಲವಿದೆಯೆಂಬ ಸುವಾರ್ತೆಯನ್ನು ನೀಡುತ್ತದೆ.'' (ಪವಿತ್ರ ಕುರ್‌ಆನ್,17:9)

''...ನಾವು ನಿಮಗೆ ಈ ಗ್ರಂಥವನ್ನು ಅವತೀರ್ಣಗೊಳಿಸಿದ್ದೇವೆ. ಇದು ಪ್ರತಿಯೊಂದು ವಸ್ತುವನ್ನು ಸುವ್ಯಕ್ತವಾಗಿ ವಿವರಿಸುವಂತಹದೂ ಆಜ್ಞಾನುಸರಣೆ ಮಾಡುವವರಿಗೆ ಮಾರ್ಗದರ್ಶನವೂ ಕೃಪೆಯೂ ಸುವಾರ್ತೆಯೂ ಆಗಿರುತ್ತದೆ.[6]''(ಪವಿತ್ರ ಕುರ್‌ಆನ್,16:89)

''ರಹ್ಮಾನನು (ಪರಮ ದಯಾಮಯನು) ಈ ಕುರ್‌ಆನನ್ನು ಕಲಿಸಿರುವನು.[7]''

(ಪವಿತ್ರ ಕುರ್‌ಆನ್,55:1,2)

''ಸತ್ಯ ಬಂದು ಬಿಟ್ಟಿತು. ಮಿಥ್ಯ ಅಳಿದು ಹೋಯಿತು. ಮಿಥ್ಯವು ಅಳಿದು ಹೋಗುವಂತಹದ್ದೇ ಎಂದು ಘೋಷಿಸಿರಿ. ನಾವು ಈ ಕುರ್‌ಆನಿನ ಅವತರಣಾ ಸರಣಿಯಲ್ಲಿ ವಿಶ್ವಾಸಿಗಳಿಗೆ ಗುಣೌಷಧ ಮತ್ತು ಅನುಗ್ರಹವನ್ನು ಅವತೀರ್ಣಗೊಳಿಸಿರುತ್ತೇವೆ...''

(ಪವಿತ್ರ ಕುರ್‌ಆನ್,17:81,82)

''...ನಾನು, ನನ್ನ ಪ್ರಭು ನನಗೆ ಅವತೀರ್ಣಗೊಳಿಸಿದ 'ದಿವ್ಯವಾಣಿ'ಯನ್ನು ಮಾತ್ರ ಅನುಸರಿಸುತ್ತೇನೆ. ಇವು ನಿಮ್ಮ ಪ್ರಭುವಿನ ಕಡೆಯಿಂದ ಜ್ಞಾನ ಪ್ರಕಾಶಗಳಾಗಿರುತ್ತವೆ ಮತ್ತು ಅವುಗಳನ್ನು ಸ್ವೀಕರಿಸಿಕೊಳ್ಳುವವರಿಗೆ ಮಾರ್ಗದರ್ಶನ ಮತ್ತು ಅನುಗ್ರಹವಾಗಿರುತ್ತವೆ.[8]''

(ಪವಿತ್ರ ಕುರ್‌ಆನ್,7:203)

''ನಿಮ್ಮ ಮುಂದೆ ಕುರ್‌ಆನ್ ಓದಿದಾಗ ಅದನ್ನು ಲಕ್ಷ್ಯವಿಟ್ಟು ಕೇಳಿರಿ ಮತ್ತು ಮೌನವಾಗಿರಿ. ನೀವು ಅನುಗ್ರಹೀತರಾಗಬಹುದು.[9]'' (ಪವಿತ್ರ ಕುರ್‌ಆನ್,7:204)

''ಇದಂತು ಸಮಸ್ತ ಲೋಕದವರಿಗೊಂದು ಉಪದೇಶವಾಗಿರುತ್ತದೆ. ನಿಮ್ಮ ಪೈಕಿ ಸನ್ಮಾರ್ಗದಲ್ಲಿನಡೆಯಲಿಚ್ಛಿಸುವ ಪ್ರತಿಯೊಬ್ಬನಿಗೆ.[10]'' (ಪವಿತ್ರ ಕುರ್‌ಆನ್,81:27,28)

''ಖಂಡಿತ ಅಲ್ಲ, ಇದೊಂದು ಉಪದೇಶವಾಗಿರುತ್ತದೆ. ಇಷ್ಟವಿದ್ದವನು ಇದನ್ನು ಸ್ವೀಕರಿಸಲಿ.'' (ಪವಿತ್ರ ಕುರ್‌ಆನ್,80:11,12)

''ಇವು ಯುಕ್ತಿಪೂರ್ಣ ಗ್ರಂಥದ ಸೂಕ್ತಗಳು.[11] ಸಚ್ಛರಿಗೆ ಮಾರ್ಗದರ್ಶನವೂ ಅನುಗ್ರಹವೂ ಆಗಿವೆ.'' (ಪವಿತ್ರ ಕುರ್‌ಆನ್,31:2,3)

''ಹಾಗಲ್ಲ, ನಾನು ನಕ್ಷತ್ರಗಳ ಸ್ಥಾನಗಳ ಆಣೆಯಿಡುತ್ತೇನೆ. ನೀವು ಅರಿಯುವುದಾದರೆ, ಇದು ಅತಿದೊಡ್ಡ ಆಣೆಯಾಗಿದೆ. ಇದೊಂದು ಉನ್ನತ ಮಟ್ಟದ ಕುರ್‌ಆನ್ ಎಂಬುದರ ಕುರಿತು. ಇದು ಒಂದು ಸುರಕ್ಷಿತ ಗ್ರಂಥದಲ್ಲಿ ಮುದ್ರಿತವಿದೆ. ಪರಿಶುದ್ಧರಲ್ಲದೆ ಬೇರಾರೂ ಇದನ್ನು ಸ್ಪರ್ಶಿಸಲಾರರು. ಇದು ಸಕಲ ಲೋಕಪಾಲಕನಿಂದ ಅವತೀರ್ಣಗೊಂಡುದಾಗಿದೆ. ಹೀಗಿರುತ್ತಾ ನೀವು ಈ ವಾಣಿಯ ಕುರಿತು ನಿರ್ಲಕ್ಷ್ಯ ತೋರುತ್ತೀರಾ?''

(ಪವಿತ್ರ ಕುರ್‌ಆನ್,56:75-81)

## ಟಿಪ್ಪಣಿ:

1. ನಿಸ್ಸಂದೇಹವಾಗಿಯೂ ಇದು ಅಲ್ಲಾಹನ ಗ್ರಂಥವಾಗಿದೆ ಎಂಬುದು ಇದರ ಸರಳವಾದ ಅರ್ಥ. ಇದು ಸಂದೇಹಾಸ್ಪದವಾದ ಯಾವ ವಿಷಯವೂ ಇಲ್ಲದಂತಹ ಗ್ರಂಥ ಎಂದೂ ಇದರಿಂದ ಅರ್ಥವಾಗುತ್ತದೆ ಮತ್ತು ಈ ಗ್ರಂಥವು ಆಮೂಲಾಗ್ರವಾಗಿ ಪರಮಾರ್ಥದ ಜ್ಞಾನವನ್ನೇ ಆಧರಿಸಿದೆ. ಏಕೆಂದರೆ ಇದರ ಕರ್ತನು ಎಲ್ಲ ಪರಮಾರ್ಥಗಳ ಜ್ಞಾನಿ.

2. ಅರ್ಥಾತ್ ಈ ಗ್ರಂಥವು ಸಂಪೂರ್ಣವಾಗಿ ಬೋಧನೆ ಹಾಗೂ ಮಾರ್ಗದರ್ಶನವೇ ಆಗಿದೆ. ಆದರೆ ಇದರಿಂದ ಫಲ ಹೊಂದಬೇಕಾದರೆ ಮನುಷ್ಯನಲ್ಲಿ ಕೆಲವು ವೈಶಿಷ್ಟ್ಯಗಳಿರಬೇಕು. ಅವುಗಳ ಪೈಕಿ ಅವನು ಭಯಭಕ್ತಿಯುಳ್ಳವನಾಗಿರಬೇಕು ಎಂಬುದು ಮೊದಲನೆಯ ವೈಶಿಷ್ಟ್ಯ. ಅಂದರೆ ಅವನು ಕೆಡುಕಿನಿಂದ ದೂರವಿರಲು ಬಯಸುವವನಾಗಿರಬೇಕು ಮತ್ತು ಒಳಿತನ್ನು ಅಪೇಕ್ಷಿಸುವವನಾಗಿರಬೇಕು.

3. ಪರೋಕ್ಷವೆಂದರೆ ಮಾನವನ ಇಂದ್ರಿಯಗಳಿಗೆ ನಿಲುಕದ, ಸಾಮಾನ್ಯ ಮನುಷ್ಯರ ನೇರ ಅನುಭವ ಮತ್ತು ವೀಕ್ಷಣೆಗೆ ಅತೀತವಾದ ವಾಸ್ತವಿಕತೆಗಳಾಗಿವೆ. ಉದಾ: ಅಲ್ಲಾಹನ ಅಸ್ತಿತ್ವ ಮತ್ತು ಗುಣಗಳು, ದೇವಚರರು, ದೇವವಾಣಿ, ಸ್ವರ್ಗ, ನರಕ ಇತ್ಯಾದಿಗಳು. ಇವುಗಳನ್ನು ಕಣ್ಣಾರೆ ನೋಡದೆಯೇ ನಂಬುವುದು ಮತ್ತು ಪ್ರವಾದಿಯು ಅವುಗಳ ಇರುವಿಕೆಯ ಸಮಾಚಾರವನ್ನು ತಿಳಿಸುತ್ತಿರುವುದರಿಂದ ಅವುಗಳ ಮೇಲೆ ವಿಶ್ವಾಸವಿಡುವುದು ಪರೋಕ್ಷದ ಮೇಲಿನ ವಿಶ್ವಾಸವಾಗಿರುತ್ತದೆ. ಈ ಅನುಭವಾತೀತ ಪರಮಾರ್ಥಗಳನ್ನು ಒಪ್ಪಿಕೊಳ್ಳಲು

ಸಿದ್ಧವಾಗಿರುವವನು ಮಾತ್ರ ಕುರ್‌ಆನಿನ ಮಾರ್ಗದರ್ಶನದಿಂದ ಪ್ರಯೋಜನ ಪಡೆಯಬಲ್ಲನು. ಅವುಗಳನ್ನು ಒಪ್ಪಿಕೊಳ್ಳಬೇಕಾದರೆ ನೋಡಬೇಕು, ರುಚಿಸಬೇಕು, ಮೂಸಬೇಕು ಎಂಬಿತ್ಯಾದಿ ನಿರ್ಬಂಧಗಳನ್ನು ಮುಂದಿರಿಸುವಾತನು ಈ ಗ್ರಂಥದಿಂದ ಸನ್ಮಾರ್ಗ ಪಡೆಯಲಾರ.

4. ಮನುಷ್ಯನು ಲೋಭಿಯೂ ಧನಾರಾಧಕನೂ ಆಗಿರದೆ ಅವನ ಸಂಪತ್ತಿನಿಂದ ಅಲ್ಲಾಹನ ದಾಸರಿಗೆ ನಿಶ್ಚಯಿಸಲ್ಪಟ್ಟಿರುವ ಹಕ್ಕುಗಳನ್ನು (ಉದಾ: ಝಕಾತ್) ಕೊಡಲು ಸಿದ್ಧನಿರಬೇಕು.

5. ಈ ಸೂಕ್ತದಲ್ಲಿ ಕಪಟ ವಿಶ್ವಾಸಿಗಳನ್ನೂ ದುರ್ಬಲ ವಿಶ್ವಾಸಿಗಳನ್ನೂ ಎಚ್ಚರಿಸಲು ಮುಖ್ಯ ಕಾರಣವೇನೆಂದರೆ ಕುರ್‌ಆನ್ ದೇವನ ವತಿಯಿಂದಾಗಿಯೆಂಬುದರಲ್ಲಿ ಅವರಿಗೆ ಸಂಶಯವಿತ್ತು. ಪ್ರವಾದಿಯ ಮೇಲೆ ನಿಜಕ್ಕೂ ಅಲ್ಲಾಹನ ಕಡೆಯಿಂದ ಸಂದೇಶವಾಣಿ ಅವತೀರ್ಣಗೊಳ್ಳುತ್ತದೆಂಬ ವಿಷಯದಲ್ಲಿಯೂ ಅವರಿಗೆ ನಂಬಿಕೆಯಿರಲಿಲ್ಲ, ಆದುದರಿಂದ ಅವರ ಕಪಟ ನೀತಿಗೆ ಛೀಮಾರಿ ಹಾಕಿ, ಆನಂತರ ಅವರು ಕುರ್‌ಆನಿನ ಬಗ್ಗೆ ವಿವೇಚಿಸುವುದಿಲ್ಲವೇ ಎಂದು ಕೇಳಲಾಗುತ್ತದೆ. ಏಕೆಂದರೆ ಇವು ಅಲ್ಲಾಹನ ಹೊರತು ಇನ್ನಾರ ವಚನಗಳಾಗಿರಲು ಸಾಧ್ಯವಿಲ್ಲವೆಂದು ಸ್ವತಃ ಈ ವಚನಗಳೇ ಸಾಕ್ಷ್ಯ ನುಡಿಯುತ್ತಿವೆ. ಅನೇಕ ವರ್ಷಗಳ ಕಾಲ ವಿವಿಧ ಕಾಲ ಮತ್ತು ಸಂದರ್ಭಗಳಲ್ಲಿ ಅನೇಕ ವಿಷಯಗಳ ಬಗ್ಗೆ ಭಾಷಣ ಮಾಡುತ್ತಾ ಹೋಗುವ ಯಾವುದೇ ವ್ಯಕ್ತಿಯ ಭಾಷಣ ಸಾದ್ಯಂತ ಸಮಾನ ಮತ್ತು ತದ್ರೂಪವಾಗಿರಲು ಸಾಧ್ಯವೇ ಇಲ್ಲ, ಅದರಲ್ಲೂ ವ್ಯತ್ಯಸ್ತ ಅಭಿಪ್ರಾಯದ ಲಕ್ಷಣಗಳಿಲ್ಲದ, ವಚನಕಾರನ ಮನದಿಂಗಿತ ಭಿನ್ನ ವರ್ಣಗಳಲ್ಲಿ ಗೋಚರಿಸದ, ಮರುಪರಿಶೀಲನೆಯ ಅಗತ್ಯವೇ ಕಂಡುಬರದ ಕೃತಿಗಳ ಸಂಕಲನವನ್ನು ರಚಿಸುವ ಸಾಮರ್ಥ್ಯ ಮನುಷ್ಯನಿಗೆ ಖಂಡಿತಾ ಇಲ್ಲ.

6. ಇಂದು ಈ ಗ್ರಂಥವನ್ನು ನಂಬಿ ಅನುಸರಿಸುವವರಿಗೆ ಇದು ಜೀವನದ ಸಕಲ ವಿಷಯಗಳಲ್ಲೂ ಸರಿಯಾದ ಮಾರ್ಗದರ್ಶನ ಕೊಡುವುದು. ಇದರ ಅನುಸರಣೆಯ ಕಾರಣದಿಂದ ಅವರ ಮೇಲೆ ಅಲ್ಲಾಹನ ಕೃಪೆಯಾಗುವುದು.

7. ಅರ್ಥಾತ್, ದಯಾಮಯನಾದ ಸಾಕ್ಷಾತ್ ಅಲ್ಲಾಹನೇ ಈ ಕುರ್‌ಆನನ್ನು ಕಲಿಸಿರುವವನಾಗಿದ್ದಾನೆ. ಈ ಮಾತಿನಿಂದ ಈ ಅಧ್ಯಾಯವನ್ನು ಆರಂಭಿಸಿದ್ದರ ಉದ್ದೇಶ, ಇದನ್ನು ಕಲಿಸುವವನು ಅಲ್ಲಾಹನೇ ಹೊರತು, ಮುಹಮ್ಮದ್(ಸ) ಸ್ವತಃ ಇದನ್ನು ರಚಿಸಿಲ್ಲ ಎಂಬುದನ್ನು ತಿಳಿಸುವುದೇ ಆಗಿದೆ. ಇದಲ್ಲದೆ ಇದರ ಹಿಂದೆ ಇನ್ನೊಂದು ಉದ್ದೇಶವೂ ಇದ್ದು ರಹ್ಮಾನ್ ಎಂಬ ಪದವು ಅದನ್ನು ಸೂಚಿಸುತ್ತದೆ. ಅದೇನೆಂದರೆ ತನ್ನ ದಾಸರ ಸನ್ಮಾರ್ಗದರ್ಶನಕ್ಕಾಗಿ ಈ ಗ್ರಂಥವನ್ನು ಅವತೀರ್ಣಗೊಳಿಸಿದುದು ಅಲ್ಲಾಹನ ಕೃಪೆಯಾಗಿದೆ. ಅವನು ತನ್ನ ಸೃಷ್ಟಿಯ ಮೇಲೆ ಅಪಾರ ಕರುಣೆಯುಳ್ಳವನಾಗಿರುವುದರಿಂದ ಈ ಗ್ರಂಥವನ್ನು ಕಳುಹಿಸುವ ಮೂಲಕ ನಿಮಗೆ ಈ ಲೋಕದಲ್ಲಿ ಸನ್ಮಾರ್ಗ ತಿಳಿಯುವಂತೆಯೂ ಪರಲೋಕದಲ್ಲಿ ಯಶಸ್ಸು ಸಿಗುವಂತೆಯೂ ಮಾಡಬೇಕಾದುದು ಅವನ ಕರುಣೆಯ ಬೇಡಿಕೆಯಾಗಿದೆ.

8. ಅರ್ಥಾತ್, ನನ್ನೊಡನೆ ಕೇಳುವ ವಸ್ತುವನ್ನು ಅಥವಾ ನನಗೆ ಬೇಕೆಂದೆನಿಸುವ ವಸ್ತುವನ್ನು ಆವಿಷ್ಕರಿಸಿ ಅಥವಾ ರಚಿಸಿ ತಂದಿರಿಸುವಂತಹ ಹುದ್ದೆಯಲ್ಲಿ ನಾನಿರುವುದಲ್ಲ, ನಾನೋರ್ವ ಸಂದೇಶವಾಹಕ ಮಾತ್ರ. ನನ್ನನ್ನು ಕಳುಹಿಸಿದವನ ಮಾರ್ಗದರ್ಶನದ ಪ್ರಕಾರ ಕಾರ್ಯವೆಸಗುವುದೇ ನನ್ನ ಕೆಲಸ. ನನ್ನನ್ನು ಕಳುಹಿಸಿದಾತನು ನನ್ನ ಬಳಿಗೆ ಪವಾಡದ ಬದಲಿಗೆ ಈ ಕುರ್‌ಆನನ್ನು ಕಳುಹಿಸಿರುವನು. ಇದರೊಳಗೆ ವಿವೇಕಪೂರ್ಣ ಪ್ರಕಾಶಗಳಿವೆ. ಇದರ ಮೇಲೆ ವಿಶ್ವಾಸವಿರಿಸಿದವರಿಗೆ ಅವರ ಜೀವನದಲ್ಲಿ ನೇರ ಮಾರ್ಗ ಸಿಗುತ್ತದೆ. ಅವರ ಸಚ್ಚಾರಿತ್ರ್ಯದಲ್ಲಿ ದೇವ ದಯೆಯ ಲಕ್ಷಣಗಳು ಸ್ಪಷ್ಟವಾಗಿ ತೋರಲಾರಂಭಿಸುತ್ತವೆ. ಇವೇ ಇದರ ಸುವ್ಯಕ್ತ ವೈಶಿಷ್ಟ್ಯ.

9. ಅರ್ಥಾತ್, ನೀವೀಗ ಕುರ್‌ಆನಿನ ಧ್ವನಿ ಕೇಳಿದೊಡನೆ ನಿಮ್ಮ ಕಿವಿಗಳೊಳಗೆ ಬೆರಳುಗಳನ್ನು ಒತ್ತಿಟ್ಟುಕೊಳ್ಳುತ್ತೀರಿ ಮತ್ತು ಇತರರು ಅದನ್ನು ಕೇಳದಂತೆ ಮಾಡಲಿಕ್ಕಾಗಿ ಗುಲ್ಲುಗಲಾಟೆಗಳನ್ನು ಎಬ್ಬಿಸುತ್ತೀರಲ್ಲವೇ? ಹೀಗೆಲ್ಲ ಮಾಡುವುದನ್ನು ಬಿಟ್ಟು ಅದರಲ್ಲಿ ಯಾವ ತರದ ಶಿಕ್ಷಣ ನೀಡಲಾಗಿದೆಯೆಂದು ಕಿವಿಗೊಟ್ಟು ಕೇಳಬಾರದೇ? ಅದರ ಬೋಧನೆಯನ್ನು ಅರಿತುಕೊಂಡ ಬಳಿಕ ಸತ್ಯ ಸ್ವೀಕಾರ ಮಾಡಿದವರಿಗೆ ಒದಗಿರುವ ಆ ಕೃಪೆಗೆ ನೀವೂ ಭಾಗಿಗಳಾಗಬಾರದೇಕೆ?

10. ಈ ಉಪದೇಶ (ಕುರ್‌ಆನ್)ವಂತೂ ಅಖಿಲ ಮಾನವಕುಲಕ್ಕಾಗಿ ಇದೆ. ಆದರೆ ಸ್ವತಃ ಸನ್ಮಾರ್ಗದಲ್ಲಿ ನಡೆಯ ಬಯಸುವವನಿಗೆ ಮಾತ್ರ ಇದರಿಂದ ಪ್ರಯೋಜನ ಪಡೆಯಲು ಸಾಧ್ಯವಾಗುತ್ತದೆ.

11. ಅರ್ಥಾತ್, ಯುಕ್ತಿಯಿಂದ ತುಂಬಿರುವ ಗ್ರಂಥದ ಸೂಕ್ತಗಳು. ಅದರ ಪ್ರತಿಯೊಂದು ನುಡಿಯೂ ಯುಕ್ತಿಪೂರ್ಣವಾಗಿದೆ.

12. ಅರ್ಥಾತ್, ಈ ಸೂಕ್ತಗಳು ಸತ್ಯಮಾರ್ಗವನ್ನು ತೋರಿಸಿ ಕೊಡುವವುಗಳಾಗಿರುತ್ತವೆ ಮತ್ತು ಅಲ್ಲಾಹನ ಕಡೆಯಿಂದ ಅನುಗ್ರಹವಾಗಿ ಬಂದಿವೆ. ಆದರೆ ಸತ್ಕರ್ಮದ ಮಾರ್ಗವನ್ನು ಅನುಸರಿಸುವವರು ಮತ್ತು ಒಳಿತನ್ನು ಅರಸುತ್ತಲಿರುವವರು ಮಾತ್ರ ಈ ಅನುಗ್ರಹ ಮತ್ತು ಮಾರ್ಗದರ್ಶನದಿಂದ ಪ್ರಯೋಜನ ಪಡೆಯುತ್ತಾರೆ.

□□□

# 2. ಇಸ್ಲಾಮ್

''ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರಗಳಿಲ್ಲ.[1] ಸನ್ಮಾರ್ಗವು ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ. ಇನ್ನು 'ತಾಗೂತ'(ಅತಿಕ್ರಮ)ನ್ನು[2] ನಿರಾಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಟ್ಟಾತನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ನೆಚ್ಚಿಕೊಂಡನು. (ಅವನು ಆಶ್ರಯ ಪಡೆದ) ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್,2:256)

''ಆದುದರಿಂದ[3] (ಸಂದೇಶವಾಹಕರೇ ಮತ್ತವರ ಅನುಯಾಯಿಗಳೇ) ನೀವು ಏಕನಿಷ್ಠೆಯಿಂದ ನಿಮ್ಮ ಮುಖವನ್ನು ಈ ಧರ್ಮದ[4] ಕಡೆ ಕೇಂದ್ರೀಕರಿಸಿರಿ. ಅಲ್ಲಾಹನು ಮಾನವನನ್ನು ಸೃಷ್ಟಿಸಿದ ಪ್ರಕೃತಿಯಲ್ಲೇ ಸ್ಥಿರವಾಗಿರಿ.[5] ಅಲ್ಲಾಹನು ಮಾಡಿದ ರಚನೆಯನ್ನು ಬದಲಾಯಿಸಲಾಗದು.[6] ಇದುವೇ ಸತ್ಯ ಮತ್ತು ಸರಿಯಾದ ಧರ್ಮವಾಗಿದೆ. ಆದರೆ ಹೆಚ್ಚಿನವರು ಅರಿಯುವುದಿಲ್ಲ.'' (ಪವಿತ್ರ ಕುರ್‌ಆನ್,30:30)

''ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಮಾತ್ರ.[7]'' (ಪವಿತ್ರ ಕುರ್‌ಆನ್,3:19)

''ಆಕಾಶಗಳಲ್ಲಿಯೂ ಭೂಮಿಯಲ್ಲಿಯೂ ಎಷ್ಟು ಸಜೀವಿ ಸೃಷ್ಟಿಗಳಿವೆಯೋ ಎಷ್ಟು ದೇವಚರರಿರುವರೋ ಸಕಲವೂ ಅಲ್ಲಾಹನ ಮುಂದೆ ಸಾಷ್ಟಾಂಗವೆರಗುತ್ತವೆ. ಅವು ಎಷ್ಟಕ್ಕೂ ಅಹಂಭಾವ ತೋರುವುದಿಲ್ಲ.'' (ಪವಿತ್ರ ಕುರ್‌ಆನ್,16:49)

''ಸಪ್ತಗಗನಗಳೂ ಭೂಮಿಯೂ ಅವುಗಳಲ್ಲಿರುವ ಸಕಲ ವಸ್ತುಗಳೂ ಅವನ ಪಾವಿತ್ರ್ಯವನ್ನು ಕೊಂಡಾಡುತ್ತಿವೆ.[8] ಅವನ ಪ್ರಶಂಸೆಯೊಂದಿಗೆ ಅವನ 'ಜಪ' (ತಸ್ಬೀಹ್) ಮಾಡದ ಯಾವ ವಸ್ತುವೂ ಇಲ್ಲ.[9] ಆದರೆ ನೀವು ಅವುಗಳ 'ಜಪ'ವನ್ನು ಗ್ರಹಿಸುವುದಿಲ್ಲ. ವಾಸ್ತವದಲ್ಲಿ ಅವನು ಅತ್ಯಂತ ಸಹನಶೀಲನೂ ಕ್ಷಮಾದಾನಿಯೂ ಆಗಿರುತ್ತಾನೆ.[10]''

(ಪವಿತ್ರ ಕುರ್‌ಆನ್,17:44)

''ಇವರೇನು ಅಲ್ಲಾಹನ ಅನುಸರಣಾ ರೀತಿಯನ್ನು (ಧರ್ಮ) ತ್ಯಜಿಸಿ ಬೇರೆ ಯಾವುದಾದರೂ ರೀತಿಯನ್ನನುಸರಿಸಲು ಇಷ್ಟಪಡುತ್ತಾರೆಯೇ? ವಸ್ತುತಃ ಆಕಾಶಗಳ ಮತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹನ ಆಜ್ಞಾಪಾಲಕಗಳಾಗಿ (ಮುಸ್ಲಿಮ್‌ಗಳಾಗಿ)ಯೇ ಇವೆ ಮತ್ತು ಸರ್ವರಿಗೂ ಅವನ ಕಡೆಗೇ ಮರಳಲಿಕ್ಕಿದೆ.[11]''

(ಪವಿತ್ರ ಕುರ್‌ಆನ್,3:83)

## ಟಿಪ್ಪಣಿ

ಇಸ್ಲಾಮ್ ಎಂಬುದು ಅರಬಿ ಪದವಾದ ಸಲಾಮ್‌ನಿಂದ ಉದ್ಭವವಾಗಿದೆ. ಅರ್ಥಾತ್ ಶಾಂತಿ ಮತ್ತು ಸಮಾಧಾನ, ಇನ್ನೊಂದರ್ಥದಲ್ಲಿ ಇಸ್ಲಾಮ್ ಎಂದರೆ ಜೀವನ ಕ್ರಮ, ಸಮರ್ಪಣೆ ಮತ್ತು ವಿಧೇಯತೆ.

ಅಲ್ಲಾಹನ ಮುಂದೆ ದಾಸ್ಯಾನುಸರಣೆಯಲ್ಲಿ ಶಿರಬಾಗುವವನು, ಅಲ್ಲಾಹನನ್ನು ಮಾತ್ರ ತನ್ನ ಮಾಲಕ, ಒಡೆಯ, ಸರ್ವಾಧಿಕಾರಿ, ವಿಧಾತ ಮತ್ತು ಆರಾಧ್ಯನೆಂದು ಒಪ್ಪಿಕೊಳ್ಳುವವನು, ತನ್ನನ್ನು ಸಂಪೂರ್ಣವಾಗಿ ಅಲ್ಲಾಹನಿಗೆ ಸಮರ್ಪಿಸಿ, ಆತನಿಂದ ದೊರೆತ ಮಾರ್ಗದರ್ಶನದಂತೆ ಜಗತ್ತಿನಲ್ಲಿ ಜೀವನ ನಡೆಸುವವನು. ಈ ತರದ ವಿಶ್ವಾಸ ಮತ್ತು ಜೀವನ ಪದ್ಧತಿಯ ಹೆಸರು ಇಸ್ಲಾಮ್. ಆದಿ ಮಾನವನ ಸೃಷ್ಟಿಯ ದಿನದಿಂದ ಭೂಮಿಯ ನಾನಾ ಭಾಗಗಳಲ್ಲಿಯೂ ಬೇರೆ ಬೇರೆ ಜನಾಂಗಗಳಲ್ಲಿ ಬಂದಿದ್ದ ಸಕಲ ಪ್ರವಾದಿಗಳ ಧರ್ಮವು ಇದುವೇ ಆಗಿತ್ತು.

ಇಸ್ಲಾಮ್ ಎಂಬುದು ಕೇವಲ ಮುಸ್ಲಿಮರ ಅಥವಾ ಅರಬರ ಧರ್ಮ ಅಥವಾ ಜೀವನ ಕ್ರಮವಲ್ಲ, ಅದು ಅಲ್ಲಾಹನ ಸೃಷ್ಟಿಗಳು ಎಂಬ ನೆಲೆಯಲ್ಲಿ ಈ ಭೂಖಂಡದಲ್ಲಿ ಮೊದಲ ಮಾನವ ಆದಮ್‌ರಿಂದ ಹಿಡಿದು ಈ ವಿಶ್ವದಲ್ಲಿ ಅಂತಿಮವಾಗಿ ಹುಟ್ಟುವ ಪ್ರತಿಯೋರ್ವ ಮಾನವನ ಧರ್ಮವಾಗಿದೆ.

1. ಇಲ್ಲಿ ಧರ್ಮ ಎಂದರೆ ಅಲ್ಲಾಹನ ಮಹಿಮೆಯ ಕುರಿತು ವಿವರಿಸಲ್ಪಟ್ಟಿರುವ ವಿಶ್ವಾಸ ಮತ್ತು ಆ ವಿಶ್ವಾಸದ ತಳಹದಿಯ ಮೇಲೆ ನಿಲ್ಲುವ ಪರಿಪೂರ್ಣ ಜೀವನ ಪದ್ಧತಿ ಎಂದರ್ಥ. ಇಸ್ಲಾಮಿನ ವೈಚಾರಿಕ, ನೈತಿಕ ಮತ್ತು ಆಚಾರ ಪದ್ಧತಿಯು ಯಾರ ಮೇಲೂ ಬಲಾತ್ಕಾರವಾಗಿ ಹೇರುವಂತಹದ್ದಲ್ಲ, ಇದು ಬಲಾತ್ಕಾರವಾಗಿ ಹೊರಿಸುವ ವಿಷಯವೇ ಅಲ್ಲ.

2. ತನ್ನ ನ್ಯಾಯವಾದ ಸರಹದ್ದನ್ನು ಮೀರಿ ಹೋಗುವಾತನನ್ನು ಭಾಷಾ ನಿಘಂಟಿನಲ್ಲಿ (Dictionary) 'ಅತಿಕ್ರಮಿ' (ತಾಗೂತ್) ಎನ್ನುತ್ತಾರೆ. ಕುರ್‌ಆನಿನ ಪಾರಿಭಾಷಿಕದಲ್ಲಿ (Terminology) ದೇವ ದಾಸ್ಯಾರಾಧನೆಯ ಸರಹದ್ದನ್ನು ಮೀರಿ ಸ್ವತಃ ಪ್ರಭುತ್ವ ಹಾಗೂ ದೇವತ್ವ ಸ್ಥಾನಕ್ಕೇರಿ ದೇವದಾಸ್ಯದಿಂದ ತನ್ನ ದಾಸ್ಯಾರಾಧನೆ ಮಾಡಿಸಿಕೊಳ್ಳುವ ದಾಸನಿಗೆ ತಾಗೂತ್ ಎನ್ನಲಾಗುತ್ತದೆ. ದೇವನಿಗೆದುರಾಗಿ ಒಬ್ಬ ದಾಸನ ದ್ರೋಹಕ್ಕೆ ಮೂರು ಹಂತಗಳಿವೆ.

i. ತಾತ್ವಿಕವಾಗಿ ದೇವಾಜ್ಞಾಪಾಲನೆಯೇ ಸಮರ್ಪಕವೆಂದು ಒಪ್ಪಿಕೊಂಡು, ಕಾರ್ಯತಃ ಅವನ ಆಜ್ಞೋಲ್ಲಂಘನೆ ಮಾಡುವುದು. ಇದನ್ನು ಫಿಸ್ಕ್ (ಕ್ರಮಭ್ರಷ್ಟತೆ) ಎನ್ನುತ್ತಾರೆ.

ii. ತಾತ್ವಿಕವಾಗಿ ದೇವನ ಆಜ್ಞಾಪಾಲನೆಯನ್ನು ನಿರಾಕರಿಸಿ ನಿರಂಕುಶನಾಗುವುದು ಅಥವಾ ಅವನ ಹೊರತು ಬೇರೆ ಯಾರನ್ನಾದರೂ ಆರಾಧಿಸುವುದು. ಇದನ್ನು ಕುಫ್ರ್ (ನಿರಾಕರಣೆ) ಎನ್ನುತ್ತಾರೆ.

iii. ಮಾಲಕನ ವಿರುದ್ಧ ಬಂಡಾಯವೆದ್ದು ಅವನ ಸಾಮ್ರಾಜ್ಯ ಮತ್ತು ಪ್ರಜೆಗಳ ಮೇಲೆ ತನ್ನ ಅಧಿಕಾರ ನಡೆಸುವುದು, ಒಬ್ಬ ದಾಸನು ಈ ಕೊನೆಯ ಹಂತವನ್ನು ತಲುಪಿದಾಗ ಅದೇ

ತಾಗೂತ್ ಎನಿಸುತ್ತದೆ. ತಾಗೂತನ್ನು ನಿರಾಕರಿಸುವ ತನಕ ಯಾರೂ ನಿಜವಾದ ಸತ್ಯವಿಶ್ವಾಸಿ ಆಗಲಾರನು.

3. ಈ ವಿಶ್ವದ ಸೃಷ್ಟಿಕರ್ತನೂ ಮಾಲಕನೂ ಏಕಮಾತ್ರ ಅಲ್ಲಾಹನ ಹೊರತು ಬೇರಾರೂ ಇಲ್ಲವೆಂಬ ನಿಜಸ್ಥಿತಿಯು ಪ್ರಕಟವಾಗಿ ಬಿಟ್ಟ ಬಳಿಕ ನಿಮ್ಮ ವರ್ತನೆ ಹೀಗಿರಬೇಕು ಎಂಬ ಅರ್ಥದಲ್ಲೇ ಈ 'ಆದುದರಿಂದ' ಎಂಬ ಪದ ಪ್ರಯೋಗವಾಗಿದೆ.

4. ಈ ಧರ್ಮ ಎಂದರೆ ಕುರ್‌ಆನ್ ಪ್ರತಿಪಾದಿಸುವ ಧರ್ಮ. ಇದರಲ್ಲಿ ದಾಸ್ಯ, ಉಪಾಸನೆ ಮತ್ತು ಅನುಸರಣೆಗೆ ಹಕ್ಕುಳ್ಳವನು ಯಾವ ಸಹಭಾಗಿಯೂ ಇಲ್ಲದ ಏಕಮಾತ್ರ ಅಲ್ಲಾಹನ ಹೊರತು ಬೇರಾರೂ ಇಲ್ಲ.

5. ಅರ್ಥಾತ್, ಸಕಲ ಮಾನವರೂ ಅವರನ್ನು ಉಂಟು ಮಾಡಿದವನಾಗಲಿ, ಪಾಲಕ ಪ್ರಭುವಾಗಲಿ, ಆರಾಧ್ಯನಾಗಲಿ, ನೈಜ ಅನುಸರಣೆಗೆ ಅರ್ಹನಾಗಲಿ ಅಲ್ಲಾಹನ ಹೊರತು ಬೇರಾರೂ ಇಲ್ಲವೆಂಬ ಪ್ರಕೃತಿಯಲ್ಲಿ ಸೃಷ್ಟಿಸಲ್ಪಟ್ಟಿರುತ್ತಾರೆ. ಇದೇ ಪ್ರಕೃತಿಯಲ್ಲಿ ನೀವು ಸ್ಥಿರವಾಗಿರಬೇಕು. ಈ ವಿಷಯವು ಈ ಪ್ರವಾದಿ ವಚನದಿಂದ ಸ್ಪಷ್ಟವಾಗುತ್ತದೆ. ''ಹುಟ್ಟುವ ಪ್ರತಿಯೊಂದು ಶಿಶುವೂ ಮೂಲತಃ ಮಾನವ ಪ್ರಕೃತಿಯಲ್ಲಿ ಹುಟ್ಟುತ್ತದೆ. ಅನಂತರ ಅದನ್ನು ಕ್ರೈಸ್ತ, ಯಹೂದಿ ಅಥವಾ ಮಜೂಸಿಯನ್ನಾಗಿ ಮಾಡಿಬಿಡುವುದು ಅದರ ತಂದೆತಾಯಿಗಳಾಗಿದ್ದಾರೆ.

6. ಅರ್ಥಾತ್, ದೇವನು ಮಾನವನನ್ನು ತನ್ನ ದಾಸನಾಗಿ ಮಾಡಿದ್ದಾನೆ. ತನ್ನ ದಾಸ್ಯತನಕ್ಕಾಗಿಯೇ ಅವನು ಮಾನವನನ್ನು ಸೃಷ್ಟಿಸಿದ್ದಾನೆ. ಅವನ ಈ ಸ್ಥಿತಿಯನ್ನು ಯಾರಿಗೂ ಬದಲಿಸಲು ಸಾಧ್ಯವಿಲ್ಲ. ವ್ಯಕ್ತಿ ದಾಸ್ಯದ ತನ್ನ ಸ್ಥಾನದಿಂದ ಮುಕ್ತನಾಗಲು ಸಾಧ್ಯವಿಲ್ಲ. ಹಾಗೆಯೇ ಅಲ್ಲಾಹನ ಹೊರತು ಬೇರೆ ಯಾರನ್ನಾದರೂ ದೇವನೆಂದು ಪರಿಗಣಿಸಿದರೆ ಅದು ನಿಜಾರ್ಥದಲ್ಲಿ ದೇವನಾಗಿ ಬಿಡಲು ಸಾಧ್ಯವಿಲ್ಲ. ಮಾನವನು ತನ್ನ ಪಾಲಿಗೆ ಎಷ್ಟೇ ದೇವರನ್ನು ಮಾಡಿಕೊಂಡರೂ ಅವನು ಒಬ್ಬ ದೇವನ ಹೊರತು ಬೇರಾರ ದಾಸನೂ ಅಲ್ಲ ಎಂಬ ವಾಸ್ತವಿಕತೆ ಅತ್ಯಂತ ನಿಶ್ಚಿತವಾದುದು. ಅದರ ಇನ್ನೊಂದು ಭಾಷಾಂತರ ''ಅಲ್ಲಾಹನ ರಚನೆಯಲ್ಲಿ ಬದಲಾವಣೆ ಮಾಡದಿರಿ'' ಎಂದಾಗಬಹುದು. ಅರ್ಥಾತ್, ಅಲ್ಲಾಹನು ಯಾವ ಪ್ರಕೃತಿಯಲ್ಲಿ ಮಾನವನನ್ನು ಸೃಷ್ಟಿಸಿದ್ದಾನೋ ಅದನ್ನು ಕೆಡಿಸುವುದು ಅಥವಾ ವಿರೂಪಗೊಳಿಸುವುದು ಸರಿಯಲ್ಲ.

7. ಅರ್ಥಾತ್, ಅಲ್ಲಾಹನ ದೃಷ್ಟಿಯಲ್ಲಿ ಮಾನವರ ಪಾಲಿಗೆ ಒಂದು ಜೀವನ ಕ್ರಮ ಮತ್ತು ಬಾಳ್ವೆಯ ಒಂದು ವಿಧಾನ ಮಾತ್ರ ಸರಿಯಾದುದು. ಅದೆಂದರೆ ಮಾನವನು ಅಲ್ಲಾಹನನ್ನು ತನ್ನ ಒಡೆಯ ಮತ್ತು ಆರಾಧ್ಯ ಎಂದು ಒಪ್ಪಿಕೊಳ್ಳುವುದು, ಅವನ ಆರಾಧನೆ ಮತ್ತು ದಾಸ್ಯಕ್ಕೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿ ಬಿಡುವುದು; ಅವನನ್ನು ಆರಾಧಿಸುವ ರೀತಿಯನ್ನು ಸ್ವತಃ ಆವಿಷ್ಕರಿಸಿಕೊಳ್ಳದೆ, ಅವನು ತನ್ನ ಸಂದೇಶವಾಹಕರ ಮುಖಾಂತರ ಕಳುಹಿಸಿದ ಮಾರ್ಗದಲ್ಲಿ ಲವಲೇಶವೂ ವ್ಯತ್ಯಾಸಪಡಿಸದೆ ಅದನ್ನು ಮಾತ್ರ ಅನುಸರಿಸುವುದು. ಆಚಾರ ವಿಚಾರಗಳ ಈ ಪದ್ಧತಿಯ ಹೆಸರೇ 'ಇಸ್ಲಾಮ್'. ಅಖಿಲ ವಿಶ್ವದ ಸೃಷ್ಟಿಕರ್ತನೂ ಒಡೆಯನೂ ಆಗಿರುವಾತನು

ತನ್ನ ಸೃಷ್ಟಿ ಮತ್ತು ಪ್ರಜೆಗಳಿಗೆ ಈ ಇಸ್ಲಾಮಿನ ವಿನಃ ಇತರ ಯಾವ ಕರ್ಮ ವಿಧಾನವನ್ನೂ ಅನುಮತಿಸದಿರುವುದು ಸಮಂಜಸವೇ ಆಗಿದೆ. ಮಾನವನು ತನ್ನ ಮೂರ್ಖತನದಿಂದ, ತಾನು ನಾಸ್ತಿಕತೆಯಿಂದ ಹಿಡಿದು ಬಹುದೇವ ವಿಶ್ವಾಸ ಮತ್ತು ವಿಗ್ರಹಾರಾಧನೆಯ ವರೆಗೆ ಪ್ರತಿಯೊಂದು ಸಿದ್ಧಾಂತ ಮತ್ತು ತತ್ವಾದರ್ಶದ ಅನುಸರಣೆ ಮಾಡಲು ಹಕ್ಕುಳ್ಳವನೆಂದು ತಿಳಿಯಬಹುದು. ಆದರೆ ವಿಶ್ವಸಾಮ್ರಾಟನ ದೃಷ್ಟಿಯಲ್ಲಂತೂ ಈ ನಿಲುಮೆಯು ಕೇವಲ ಬಂಡಾಯವಾಗಿರುತ್ತದೆ.

8. ಅರ್ಥಾತ್, ಅಖಿಲ ವಿಶ್ವವೂ ಅದರ ಪ್ರತಿಯೊಂದು ವಸ್ತುವೂ ತಮ್ಮ ಸಂಪೂರ್ಣ ಅಸ್ತಿತ್ವದೊಂದಿಗೆ, ತಮ್ಮನ್ನು ಸೃಷ್ಟಿಸಿದವನೂ ತಮ್ಮ ಪಾಲಕ ಪ್ರಭುವೂ ರಕ್ಷಕನೂ ಆಗಿರುವಾತನು ಸಕಲ ದೋಷಗಳಿಂದ ವಿರಹಿತನೆಂದೂ ಅವನ ದೇವತ್ವದಲ್ಲಿ ಇತರ ಯಾರದೇ ಸಹಭಾಗಿತ್ವವಿಲ್ಲವೆಂದೂ ಸಾಕ್ಷ್ಯ ನೀಡುತ್ತಿವೆ.

9. 'ಹಮ್ದ್' (ಅರ್ಥಾತ್, ಅಲ್ ಹಮ್ದುಲಿಲ್ಲಾಹ್) ನೊಂದಿಗೆ 'ತಸ್ಬೀಹ್' (ಅಲ್ಲಾಹನ ಪ್ರಶಂಶೆಯೊಂದಿಗೆ ಅವನ ಪಾವನತೆಯನ್ನು ಕೊಂಡಾಡುವುದು) ಮಾಡುವುದೆಂದರೆ, ಪ್ರತಿಯೊಂದು ವಸ್ತುವೂ ತನ್ನ ಸೃಷ್ಟಿಕರ್ತ ಮತ್ತು ಪಾಲಕ ಪ್ರಭು ಸಕಲ ಲೋಪ ದೋಷಗಳಿಂದ ವಿರಹಿತನೆಂದು ಪ್ರಕಟಿಸುತ್ತಿರುವುದು ಮಾತ್ರವಲ್ಲ, ಅದರೊಂದಗೆ ಅವನು ಸಕಲ ಪರಿಪೂರ್ಣತೆ, ಸಮಗ್ರತೆ, ಉತ್ಕೃಷ್ಟತೆಗಳನ್ನು ಹೊಂದಿದವನೂ ಸಕಲ ಪ್ರಶಂಶೆಗಳಿಗೆ ಅರ್ಹನೂ ಆಗಿರುತ್ತಾನೆಂಬುದನ್ನು ಸಾರಿ ಹೇಳುತ್ತದೆ.

10. ಅರ್ಥಾತ್, ನೀವು ಅವನ ಮುಂದೆ ಉದ್ಧಟತನದೊಂದಿಗೆ ವರ್ತಿಸುತ್ತಲೇ ಇದ್ದರೂ ಅವನು ನಿಮ್ಮನ್ನು ಕ್ಷಮಿಸುತ್ತಲೇ ಹೋಗುತ್ತಿರುವುದು ಅವನ ಸಹನೆ ಮತ್ತು ಕ್ಷಮಾಶೀಲತೆಯ ದ್ಯೋತಕವಾಗಿದೆ. ಅವನು ನಿಮಗೆ ಉಪಜೀವನ ನೀಡುವುದನ್ನು ತಡೆಯುವುದಿಲ್ಲ, ತನ್ನ ಅನುಗ್ರಹಗಳಿಂದ ನಿಮ್ಮನ್ನು ವಂಚಿತಗೊಳಿಸುವುದಿಲ್ಲ, ನಿಮ್ಮ ಪ್ರತಿಯೊಂದು ಅಸಭ್ಯ ವರ್ತನೆಗಾಗಿ ತಕ್ಷಣ ನಿಮ್ಮ ಮೇಲೆ ಸಿಡಿಲೆರಗಿಸುವುದಿಲ್ಲ, ಅವನು ವ್ಯಕ್ತಿಗಳಿಗೂ ಜನಾಂಗಗಳಿಗೂ ತಿಳಿದುಕೊಳ್ಳಲಿಕ್ಕೂ ಸುಧಾರಿಸಿಕೊಳ್ಳಲಿಕ್ಕೂ ಸಾಕಷ್ಟು ಕಾಲಾವಕಾಶ ನೀಡುತ್ತಿರುತ್ತಾನೆ. ನಿಮಗೆ ಸದ್ಬೋಧನೆ ನೀಡಲಿಕ್ಕೂ ಸನ್ಮಾರ್ಗ ತೋರಿಸಲಿಕ್ಕೂ ಆಗಾಗ ಪ್ರವಾದಿಗಳನ್ನೂ ಸುಧಾರಕರನ್ನೂ ಧರ್ಮ ಪ್ರಚಾರಕರನ್ನೂ ಎಬ್ಬಿಸುತ್ತಲೇ ಇರುತ್ತಾನೆ. ತನ್ನ ತಪ್ಪುಗಳನ್ನು ಮನಗಂಡು ನೇರ ಮಾರ್ಗವನ್ನು ಅವಲಂಬಿಸಿದವನ ಗತ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಇವೆಲ್ಲವೂ ಅವನ ಸಹನೆ ಮತ್ತು ಕ್ಷಮಾಶೀಲತೆಯ ಕುರುಹುಗಳೇ ಆಗಿವೆ.

11. ಅರ್ಥಾತ್, ಇಡೀ ವಿಶ್ವ ಮತ್ತು ವಿಶ್ವದ ಪ್ರತಿಯೊಂದು ವಸ್ತುವಿನ ಧರ್ಮ ಇಸ್ಲಾಮ್ ಆಗಿದೆ ಅಂದರೆ ಅಲ್ಲಾಹನ ದಾಸ್ಯಾರಾಧನೆ ಮತ್ತು ದಾಸ್ಯಾನುಸರಣೆ. ನೀವೀಗ ಇದೇ ವಿಶ್ವದೊಳಗೆ ಇರುತ್ತ ಇಸ್ಲಾಮನ್ನು ಬಿಟ್ಟು ಇನ್ನಾವ ಜೀವನ ವಿಧಾನವನ್ನು ಹುಡುಕುತ್ತಿರುವಿರಿ?

□□□

# 3. ಅಲ್ಲಾಹ್ ಕಾರುಣ್ಯವಂತ

''ನಿಮ್ಮ ದೇವ ಏಕೈಕ ದೇವ. ಆ ದಯಾಮಯನೂ ಕರುಣಾಳುವೂ ಆಗಿರುವವನ ಹೊರತು ಇನ್ನೊಬ್ಬ ದೇವನಿಲ್ಲ.'' (ಪವಿತ್ರ ಕುರ್‌ಆನ್,2:163)

''ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸುವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು ಶೇಖರಿಸಿದ ಪಾಪದ ದಂಡವೂ ಅವನ ಮೇಲೆಯೇ ಇರುವುದು...''

(ಪವಿತ್ರ ಕುರ್‌ಆನ್,2:286)

''ನೀವು ಅಲ್ಲಾಹನನ್ನು ಹೇಗೆ ನಿರಾಕರಿಸುತ್ತೀರಿ? ನೀವಾದರೋ ನಿರ್ಜೀವಿಗಳಾಗಿದ್ದಿರಿ. ಅವನು ನಿಮಗೆ ಜೀವವಿತ್ತನು. ಇನ್ನು ಅವನೇ ನಿಮ್ಮ ಪ್ರಾಣ ತೆಗೆಯುವನು ಮತ್ತು ಅವನೇ ನಿಮಗೆ ಪುನರ್ಜೀವನ ನೀಡುವನು. ತರುವಾಯ ನಿಮಗೆ ಆತನೆಡೆಗೇ ಮರಳಿ ಹೋಗಬೇಕಾಗಿದೆ. ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ. ಬಳಿಕ ಗಗನದೆಡೆ ಗಮನ ಹರಿಸಿ ಸಪ್ತಗಗನ(ಏಳು ಆಕಾಶ)[1]ಗಳಿಗೆ ರೂಪು ಕೊಟ್ಟನು. ಆತನು ಸಕಲ ವಿಷಯಗಳ ಜ್ಞಾನಿಯಾಗಿರುತ್ತಾನೆ.[2]'' (ಪವಿತ್ರ ಕುರ್‌ಆನ್,2:28,29)

''(ಓ ಸಂದೇಶವಾಹಕರೇ, ನನ್ನ ಪರವಾಗಿ) ಹೇಳಿರಿ; ತಮ್ಮ ಮೇಲೆಯೇ ಅತಿರೇಕವೆಸಗಿಕೊಂಡಿರುವ ನನ್ನ ದಾಸರೇ! ಅಲ್ಲಾಹನ ಕರುಣೆಯ ಬಗ್ಗೆ ನಿರಾಶರಾಗಬೇಡಿರಿ. ನಿಶ್ಚಯವಾಗಿಯೂ ಅಲ್ಲಾಹನು ಸಕಲ ಪಾಪಗಳನ್ನು ಕ್ಷಮಿಸಿ ಬಿಡುತ್ತಾನೆ. ಅವನಂತು ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.[3]'' (ಪವಿತ್ರ ಕುರ್‌ಆನ್,39:53)

''ನಿಮ್ಮನ್ನು ಅಂಧಕಾರಗಳಿಂದ ಹೊರತೆಗೆದು ಪ್ರಕಾಶದೆಡೆಗೆ ತರಲಿಕ್ಕಾಗಿ ತನ್ನ ದಾಸನ ಮೇಲೆ ಸುಸ್ಪಷ್ಟ ಸೂಕ್ತಗಳನ್ನು ಅವತೀರ್ಣಗೊಳಿಸುತ್ತಿರುವವನು ಅಲ್ಲಾಹನೇ ತಾನೆ. ವಾಸ್ತವದಲ್ಲಿ ಅಲ್ಲಾಹನು ನಿಮ್ಮ ಪಾಲಿಗೆ ಮಹಾ ವತ್ಸಲನೂ ಕರುಣಾಮಯಿಯೂ ಆಗಿರುತ್ತಾನೆ.''

(ಪವಿತ್ರ ಕುರ್‌ಆನ್,57:9)

''ನಮ್ಮ ನಿದರ್ಶನಗಳ ಮೇಲೆ ವಿಶ್ವಾಸವಿಡುವವರು ನಿಮ್ಮ ಬಳಿಗೆ ಬಂದಾಗ ಅವರೊಡನೆ ಹೇಳಿರಿ, ನಿಮ್ಮ ಮೇಲೆ ಶಾಂತಿ ಇದೆ. ನಿಮ್ಮ ಪ್ರಭು ಔದಾರ್ಯ ನೀತಿಯನ್ನು ತನ್ನ ಮೇಲೆ ವಿಧಿಸಿಕೊಂಡಿದ್ದಾನೆ. ನಿಮ್ಮಲ್ಲಾರಾದರೂ ತಿಳಿಗೇಡಿತನದಿಂದ ದೋಷಮಾಡಿ, ಆ ಬಳಿಕ ಪಶ್ಚಾತ್ತಾಪ ಪಟ್ಟರೆ ಮತ್ತು ತನ್ನನ್ನು ಸುಧಾರಿಸಿಕೊಂಡರೆ, ಅವನು (ಅಲ್ಲಾಹನು) ಅವನನ್ನು ಕ್ಷಮಿಸುತ್ತಾನೆ ಮತ್ತು ಮೃದುನೀತಿಯನ್ನನುಸರಿಸುತ್ತಾನೆ.'' (ಪವಿತ್ರ ಕುರ್‌ಆನ್,6:54)

''...ಅಲ್ಲಾಹನೇ ಅತ್ಯುತ್ತಮ ರಕ್ಷಕನು ಮತ್ತು ಅವನು ಎಲ್ಲರಿಗಿಂತಲೂ ಹೆಚ್ಚು ಕರುಣಾಳುವಾಗಿರುತ್ತಾನೆ'' (ಪವಿತ್ರ ಕುರ್‌ಆನ್,12:64)

''...ನೀನೇ ನಮ್ಮ ರಕ್ಷಕ ಮಿತ್ರನಾಗಿರುವೆ. ನಮ್ಮನ್ನು ಕ್ಷಮಿಸು. ನಮ್ಮ ಮೇಲೆ ಕೃಪೆತೋರು. ನೀನು ಕ್ಷಮಿಸುವವರಲ್ಲಿ ಅತಿ ಶ್ರೇಷ್ಠನಾಗಿರುವೆ. ನಮಗಾಗಿ ಇಹಲೋಕದ ಹಿತವನ್ನೂ ಪರಲೋಕದ ಹಿತವನ್ನೂ ಲಿಖಿತಗೊಳಿಸು. ನಾವು ನಿನ್ನ ಕಡೆಗೆ ಮರಳಿದೆವು. ಇದಕ್ಕುತ್ತರವಾಗಿ ಹೀಗೆ ಅಪ್ಪಣೆಯಾಯಿತು ನಾನು ಇಷ್ಟಬಂದವರಿಗೆ ಶಿಕ್ಷೆ ವಿಧಿಸುತ್ತೇನೆ. ಆದರೆ ನನ್ನ ಕರುಣೆಯು ಸರ್ವವನ್ನೂ ವ್ಯಾಪಿಸಿ ಕೊಂಡಿದೆ. ನಾನು ಅದನ್ನು ಆಜ್ಞೋಲ್ಲಂಘನೆ ಮಾಡದ, ಝಕಾತ್ ಕೊಡುವ ಮತ್ತು ನನ್ನ ನಿದರ್ಶನಗಳ ಮೇಲೆ ವಿಶ್ವಾಸ ವಿರಿಸುವವರಿಗಾಗಿ ಲಿಖಿತಗೊಳಿಸುವೆನು.[4]'' (ಪವಿತ್ರ ಕುರ್‌ಆನ್,7:155-156)

''...ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಕೃಪೆಯಿಲ್ಲದಿರುತ್ತಿದ್ದರೆ, ನಿಮ್ಮ ಪೈಕಿ ಒಬ್ಬನೂ ಪರಿಶುದ್ಧನಾಗಲಾರ. ಆದರೆ ಅಲ್ಲಾಹನೇ ತಾನಿಚ್ಛಿಸಿದವರನ್ನು ಪರಿಶುದ್ಧಗೊಳಿಸುತ್ತಾನೆ ಮತ್ತು ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್,24:21)

''ಓದಿರಿ, ಮತ್ತು ನಿಮ್ಮ ಪ್ರಭು ಮಹಾ ಉದಾರಿ. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು.[6] ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯ ಪಾಲಿಸಿದನು.''

(ಪವಿತ್ರ ಕುರ್‌ಆನ್,96:3-5)

''ನಾವು ಅವನಿಗೆ ಮಾರ್ಗದರ್ಶನ ಮಾಡಿದೆವು. ಅವನು ಕೃತಜ್ಞತೆ ಸಲ್ಲಿಸುವವನಾಗಲಿ ಅಥವಾ ಕೃತಘ್ನನಾಗಲಿ.[8]'' (ಪವಿತ್ರ ಕುರ್‌ಆನ್,76:3)

''ನೆಲ ಹಾಗೂ ಸಾಗರಗಳ ಅಂಧಕಾರಗಳಲ್ಲಿ ನಿಮಗೆ ದಾರಿ ತೋರಿಸುವವನೂ[9] ತನ್ನ ಕೃಪೆಗಿಂತ ಮುಂಚಿತವಾಗಿ ಮಾರುತಗಳನ್ನು ಸುವಾರ್ತೆಯೊಂದಿಗೆ ಕಳುಹಿಸುವವನೂ ಯಾರು?[10] ಅಲ್ಲಾಹನೊಂದಿಗೆ ಇತರ ದೇವರೂ ಇರುವರೇ? ಅಲ್ಲಾಹನು ಇವರು ಮಾಡುತ್ತಿರುವ 'ದೇವ ಸಹಭಾಗಿತ್ವ'ಕ್ಕಿಂತ ಮಹೋನ್ನತನು.'' (ಪವಿತ್ರ ಕುರ್‌ಆನ್,27:63)

''ಓ ನನ್ನ ಪ್ರಭೂ, ನೀನು ನನಗೆ ಸಾಮ್ರಾಜ್ಯಾಧಿಕಾರವನ್ನು ದಯಪಾಲಿಸಿದೆ. ವಿಷಯಗಳ ಆಳವನ್ನರಿಯಲು ಕಲಿಸಿಕೊಟ್ಟೆ. ಓ ಆಕಾಶಗಳ ಮತ್ತು ಭೂಮಿಯ ನಿರ್ಮಾಪಕಾ! ಇಹದಲ್ಲೂ ಪರದಲ್ಲೂ ನೀನೇ ನನ್ನ ರಕ್ಷಕ ಮಿತ್ರನು. ನನ್ನನ್ನು ಮುಸ್ಲಿಮನನ್ನಾಗಿ ಅಂತ್ಯಗೊಳಿಸು ಮತ್ತು ಅಂತಿಮವಾಗಿ ಸಜ್ಜನರೊಂದಿಗೆ ಸೇರಿಸು.[11]'' (ಪವಿತ್ರ ಕುರ್‌ಆನ್,12:101)

''ನೀವು ನಿಮ್ಮ ಪ್ರಭುವಿನೊಡನೆ ಕ್ಷಮೆ ಬೇಡಿರಿ ಮತ್ತು ಅವನ ಕಡೆಗೆ ಮರಳಿರಿ. ನಿಶ್ಚಯವಾಗಿಯೂ ನನ್ನ ಪ್ರಭು ಕರುಣಾಳುವೂ ತನ್ನ ಸೃಷ್ಟಿಯ ಮೇಲೆ ಪ್ರೇಮವುಳ್ಳವನೂ ಆಗಿರುತ್ತಾನೆ.[12]'' (ಪವಿತ್ರ ಕುರ್‌ಆನ್,11:90)

''ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು (ಸೃಷ್ಟಿಗಳ ಮೇಲೆ)

ಕರುಣೆಯನ್ನು ಬೋಧಿಸಿದ[13] ಜನರ ಸಾಲಿಗೆ ಸೇರುವುದು. (ಇವರೇ ಬಲಗಡೆಯವರು)''

(ಪವಿತ್ರ ಕುರ್‌ಆನ್,90:17)

''ಅಲ್ಲಾಹನು ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲ ವಸ್ತುಗಳನ್ನು ನಿಮಗೆ ಅಧೀನಗೊಳಿಸಿರುವುದನ್ನೂ ತನ್ನ ಪ್ರತ್ಯಕ್ಷ ಹಾಗೂ ರಹಸ್ಯ ಅನುಗ್ರಹಗಳನ್ನು ನಿಮಗೆ ಪೂರ್ತಿಗೊಳಿಸಿ ಕೊಟ್ಟಿರುವುದನ್ನೂ ನೀವು ನೋಡುತ್ತಿಲ್ಲವೇ? ಹೀಗಿದ್ದೂ ಮಾನವರಲ್ಲಿ ಕೆಲವರು ತಮ್ಮ ಬಳಿ ಯಾವುದೇ ಜ್ಞಾನವಾಗಲಿ, ಸನ್ಮಾರ್ಗ ದರ್ಶನವಾಗಲಿ ಬೆಳಕು ತೋರಿಸುವ ಯಾವುದಾದರೂ ಗ್ರಂಥವಾಗಲಿ ಇಲ್ಲದೆ ಅಲ್ಲಾಹನ ವಿಷಯದಲ್ಲಿ ಜಗಳಾಡುತ್ತಾರೆ.[14]''

(ಪವಿತ್ರ ಕುರ್‌ಆನ್,31:20)

## ಟಿಪ್ಪಣಿ

1. ಏಳು ಆಕಾಶಗಳ ವಾಸ್ತವಿಕತೆ ಏನೆಂದು ನಿರ್ಧರಿಸುವುದು ಕಷ್ಟ. ಮನುಷ್ಯ ಎಲ್ಲಾ ಕಾಲಗಳಲ್ಲಿ ಆಕಾಶ ಅಥವಾ ನಭೋಮಂಡಲದ ಬಗ್ಗೆ ತನ್ನ ವೀಕ್ಷಣೆ ಮತ್ತು ಊಹೆಯ ಆಧಾರದಲ್ಲಿ ವಿಭಿನ್ನ ಕಲ್ಪನೆಗಳನ್ನು ಇರಿಸುತ್ತಾ ಬಂದಿದ್ದಾನೆ. ಅದು ನಿರಂತರ ಬದಲಾಗುತ್ತಾ ಬಂದಿದೆ. ಒಟ್ಟಿನಲ್ಲಿ ಅದರ ಅರ್ಥ ಭೂಮಿಯಿಂದ ಹೊರತಾದ ಅಗಾಧ ವಿಶ್ವವನ್ನು ಅಲ್ಲಾಹನು ನಿಖರವಾದ ಏಳು ವಿಭಾಗಗಳಲ್ಲಿ ವಿಂಗಡಿಸಿದ್ದಾನೆ ಅಥವಾ ಭೂಮಿ ವಿಶ್ವದ ಯಾವ ಭಾಗದಲ್ಲಿ ನೆಲೆನಿಂತಿದೆಯೋ ಅದು ಏಳು ವಿಭಾಗಗಳನ್ನೊಳಗೊಂಡಿದೆ ಎಂದಾಗಿರಬಹುದು.

2. ಈ ವಾಕ್ಯದಲ್ಲಿ ಎರಡು ಮಹತ್ವಪೂರ್ಣ ಸಂಗತಿಗಳ ಕಡೆಗೆ ಗಮನ ಸೆಳೆಯಲಾಗಿದೆ.[1] ಅಲ್ಲಾಹನು ನಿಮ್ಮೆಲ್ಲ ಚಲನವಲನಗಳನ್ನೂ ಅರಿತಿರುವಾಗ ನೀವು ಅಂತಹ ಸರ್ವಜ್ಞನೆದುರು ಸತ್ಯನಿಷೇಧ ಹಾಗೂ ವಿದ್ರೋಹದ ಧೋರಣೆಯನ್ನು ಅನುಸರಿಸುವ ಸಾಹಸ ಹೇಗೆ ಮಾಡುವಿರಿ?[2]. ಸರ್ವವನ್ನೂ ಅರಿಯುವ ಅಲ್ಲಾಹನೆದುರು ವಿದ್ರೋಹವೆಸಗಿ ನೀವು ಅಜ್ಞಾನದ ಅಂಧಕಾರದಲ್ಲಿ ಅಲೆದಾಡಬಹುದೇ ಹೊರತು ಅದರಲ್ಲಿ ಇನ್ನಾವ ಪುರುಷಾರ್ಥವೂ ಇಲ್ಲ.

3. ಇದು ಸಕಲ ಮಾನವರನ್ನು ಅಭಿಸಂಬೋಧಿಸಿ ಹೇಳಿದ ಮಾತು. ಇಲ್ಲಿ ಸತ್ಯವಿಶ್ವಾಸಿಗಳನ್ನು ಮಾತ್ರ ಉದ್ದೇಶಿಸಲಾಗಿದೆಯೆನ್ನಲು ಬಲವಾದ ಯಾವ ಪುರಾವೆಯೂ ಇಲ್ಲ. ಪ್ರಸಿದ್ಧ ಗ್ರಂಥಕಾರರಾದ ಅಲ್ಲಾಮಾ ಇಬ್ನು ಕಸೀರರು ಬರೆದಿರುವಂತೆ, ಪಶ್ಚಾತ್ತಾಪ ಮತ್ತು ಮರಳಿಕೆ ಇಲ್ಲದೆಯೇ ಅಲ್ಲಾಹನು ಸಕಲ ಪಾಪಗಳನ್ನೂ ಕ್ಷಮಿಸಿ ಬಿಡುತ್ತಾನೆಂದಲ್ಲ, ಪಾಪಗಳಿಗೆ ಕ್ಷಮೆ ಸಿಗಬೇಕಾದರೆ ಆರಾಧನೆ ಮತ್ತು ಅನುಸರಣೆಯ ಕಡೆಗೆ ಮರಳಬೇಕೆಂದೂ ಅಲ್ಲಾಹನು ಅವತೀರ್ಣಗೊಳಿಸಿದ ಸಂದೇಶವನ್ನು ಸ್ವೀಕರಿಸಿಕೊಳ್ಳಬೇಕೆಂದೂ ಆಗಿದೆ. ವಾಸ್ತವದಲ್ಲಿ ಈ ಸೂಕ್ತವು, ಅಜ್ಞಾನ ಕಾಲದಲ್ಲಿ ಕೊಲೆ, ವ್ಯಭಿಚಾರ, ಕಳ್ಳತನ, ದರೋಡೆ ಮತ್ತು ಇದೇ ತರದ ಇತರ ಘೋರ ಪಾಪ ಕಾರ್ಯಗಳನ್ನೆಸಗಿದ್ದು ಈ ಪಾಪಗಳು ಕ್ಷಮಿಸಲ್ಪಡುವ ವಿಷಯದಲ್ಲಿ ನಿರಾಶರಾಗಿ ಬಿಟ್ಟಿದ್ದವರಿಗೆ ಒಂದು ಆಶಾಕಿರಣದ ರೂಪದಲ್ಲಿ ಅವತೀರ್ಣವಾಗಿತ್ತು. ಇದರಲ್ಲಿ

ನೀವು ಅಲ್ಲಾಹನ ಅನುಗ್ರಹದ ಬಗ್ಗೆ ನಿರಾಶರಾಗಬೇಡಿರಿ, ನೀವು ಯಾವ ದುಷ್ಕೃತ್ಯವನ್ನೇ ಎಸಗಿದ್ದರೂ ಈಗ ನೀವು ನಿಮ್ಮ ಪ್ರಭುವಿನ ಅನುಸರಣೆಯ ಕಡೆಗೆ ಮರಳಿ ಬಂದರೆ, ಎಲ್ಲವೂ ಕ್ಷಮಿಸಲ್ಪಡುವುದು ಎಂದು ಹೇಳಲಾಗಿದೆ.

4. ಅರ್ಥಾತ್, ಅಲ್ಲಾಹನ ದೇವತ್ವಕ್ಕೆ ಮುಖ್ಯವಾದುದು ಕ್ರೋಧವೂ ಅದರಲ್ಲಿ ಒಮ್ಮೊಮ್ಮೆ ದಯೆ ಹಾಗೂ ಅನುಗ್ರಹಗಳು ಪ್ರಕಟವಾಗಿ ಬಿಡುವುದೂ ಮಾತ್ರವಲ್ಲ, ಅವನ ದೇವತ್ವಕ್ಕೆ ದಯೆಯೇ ಮುಖ್ಯ. ಇಡೀ ವಿಶ್ವದ ವ್ಯವಸ್ಥೆಯು ಅದರ ಮೇಲೆಯೇ ನಿಂತಿದೆ. ದಾಸರ ವಿದ್ರೋಹ ಮತ್ತು ಹಟಮಾರಿತನ ಮಿತಿ ಮೀರಿ ಹೋದಾಗ ಮಾತ್ರ ಅವನ ಕ್ರೋಧವು ಪ್ರಕಟವಾಗುತ್ತದೆ.

5. ಅರ್ಥಾತ್, ಶೈತಾನನು ನಿಮ್ಮನ್ನು ಅಶ್ಲೀಲ ಮತ್ತು ದುಷ್ಟ ಕೃತ್ಯಗಳ ಕೊಳಕಿನಲ್ಲಿ ಮುಳುಗಿಸಲು ಎಷ್ಟೊಂದು ಹವಣಿಸುತ್ತಿದ್ದಾನೆಂದರೆ, ಅಲ್ಲಾಹ್ ತನ್ನ ಅನುಗ್ರಹದಿಂದ ನಿಮಗೆ ಒಳಿತು ಕೆಡುಕುಗಳ ಅಂತರವನ್ನು ತೋರಿಸಿಕೊಡದಿದ್ದರೆ ಮತ್ತು ನಿಮಗೆ ನಿಮ್ಮ ಸಂಸ್ಕರಣೆಗೆ ಬೇಕಾದ ಶಿಕ್ಷಣವನ್ನೂ ಅನುಗ್ರಹವನ್ನೂ ಪ್ರದಾನ ಮಾಡದಿದ್ದರೆ, ನಿಮ್ಮ ಪೈಕಿ ಯಾರಿಗೂ ತನ್ನ ಸ್ವಪ್ರಯತ್ನದಿಂದ ಪರಿಶುದ್ಧನಾಗಲು ಸಾಧ್ಯವೇ ಇಲ್ಲ.

6. ಅರ್ಥಾತ್, ಅಲ್ಲಾಹನು ಮಾನವನನ್ನು ತುಚ್ಛ ಸ್ಥಿತಿಯಿಂದ ಸೃಷ್ಟಿಸಿ, ಆ ಬಳಿಕ ಮಾನವನನ್ನು ಸೃಷ್ಟಿಗಳ ಅತ್ಯುನ್ನತ ಗುಣವಾಗಿರುವ ಜ್ಞಾನಶಕ್ತಿಯುಳ್ಳವನಾಗಿ ಮಾಡಿದ್ದು ಮಾತ್ರವಲ್ಲ, ದೊಡ್ಡ ಪ್ರಮಾಣದಲ್ಲಿ ಜ್ಞಾನದ ಪ್ರಸಾರ, ಪ್ರಗತಿ ಮತ್ತು ತಲೆ ತಲಾಂತರಗಳಲ್ಲಿ ಅದರ ರಕ್ಷಣೆಯ ಸಾಧನವಾಗಿರುವ ಲೇಖನಿಯನ್ನು ಬಳಸುವ ಕಲೆಯನ್ನು ಅವನಿಗೆ ಕಲಿಸಿದ್ದು, ಅಲ್ಲಾಹನ ಮಹಾ ಕೃಪೆಯೇ ಆಗಿದೆ. ಅವನ ದಿವ್ಯ ಪ್ರೇರಣೆಯಿಂದ ಮಾನವನಿಗೆ ಲೇಖನಿ ಮತ್ತು ಬರೆಯುವ ಕಲೆಯ ಈ ಜ್ಞಾನವನ್ನು ನೀಡದಿರುತ್ತಿದ್ದರೆ ಮಾನವನ ಜ್ಞಾನಾರ್ಹತೆಯು ಜಡವಾಗಿ ಹೋಗಿ ಬಿಡುತ್ತಿತ್ತು. ಅದಕ್ಕೆ ಬೆಳೆಯುವ, ಹಬ್ಬುವ ಮತ್ತು ಒಂದು ತಲೆಮಾರಿನಿಂದ ಇನ್ನೊಂದಕ್ಕೆ ತಲಪುವ ಮತ್ತು ಇನ್ನಷ್ಟು ಪ್ರಗತಿ ಹೊಂದುತ್ತ ಹೋಗುವ ಅವಕಾಶ ಸಿಗುತ್ತಿರಲಿಲ್ಲ.

7. ಅರ್ಥಾತ್, ಮಾನವನು ಮೂಲತಃ ತೀರಾ ಅಜ್ಞಾನಿಯಾಗಿದ್ದನು. ಅವನಿಗೆ ಸಿಕ್ಕಿದ ವಿದ್ಯೆಯೆಲ್ಲವೂ ಅಲ್ಲಾಹನು ದಯಪಾಲಿಸಿದ್ದರಿಂದಲೇ ಸಿಕ್ಕಿತು. ಮಾನವನು ತಾನು ಕಂಡು ಹಿಡಿದನೆನ್ನುವ ವಸ್ತುಗಳ ಪೈಕಿ ಯಾವುದೂ ಆರಂಭದಲ್ಲಿ ಅವನಿಗೆ ತಿಳಿದಿರಲಿಲ್ಲ, ಅಲ್ಲಾಹನು ತಾನಿಚ್ಛಿಸಿದಾಗ ಅವುಗಳ ಜ್ಞಾನವನ್ನು ಅವನಿಗೆ ದಯಪಾಲಿಸಿದನು. ಮಾನವನಿಗೆ ಭಾಸವೇ ಆಗದ ರೀತಿಯಲ್ಲಿ ಅಲ್ಲಾಹನು ಅವನಿಗೆ ಈ ತಿಳುವಳಿಕೆಯನ್ನು ನೀಡುತ್ತಾನೆ.

8. ಅರ್ಥಾತ್, ಕುಫ್ರ್(ಸತ್ಯನಿಷೇಧ) ಮತ್ತು ಶಿರ್ಕ್(ದೇವ ಸಹಭಾಗಿತ್ವ) ಇವುಗಳನ್ನೆಸಗುವ ಸ್ವಾತಂತ್ರ್ಯವನ್ನು ಅವನಿಗೆ ನೀಡುವುದರ ಜೊತೆಗೇ, ಕೃತಜ್ಞತೆಯ ಮಾರ್ಗ ಯಾವುದು ಮತ್ತು ಕೃತಘ್ನತೆಯ ಮಾರ್ಗ ಯಾವುದು ಎಂಬುದನ್ನು ತಿಳಿಸಿ, ಆ ಬಳಿಕ ಅವನು ಯಾವ ಮಾರ್ಗವನ್ನು ಅನುಸರಿಸಿದರೂ ಅದಕ್ಕೆ ಸ್ವತಃ ಅವನೇ ಹೊಣೆಗಾರನಾಗಿ ಬಿಡುವಂತೆ ಮಾಡಿದನು. ಈ

ಸೂಕ್ತದಲ್ಲಿರುವ ಮಾರ್ಗದರ್ಶನ ಮಾಡುವೆವು ಎಂಬ ಮಾತಿನ ಅರ್ಥ, ಯಾವುದಾದರೂ ಒಂದು ಬಗೆಯ ಮಾರ್ಗದರ್ಶನವಲ್ಲವೆಂದೂ ಅನೇಕ ರೂಪಗಳಿವೆಯೆಂದೂ ತಿಳಿದು ಬರುತ್ತದೆ. ಉದಾ:

i. ಪ್ರತಿಯೊಬ್ಬ ಮನುಷ್ಯನಿಗೂ ಜ್ಞಾನ ಮತ್ತು ಬುದ್ಧಿಶಕ್ತಿಯನ್ನು ಕೊಡುವುದರೊಂದಿಗೆ ಒಂದು ನೈತಿಕ ಪ್ರಜ್ಞೆಯನ್ನು ನೀಡಲಾಗಿದೆ. ಇದರ ಮೂಲಕ ಅವನು ಸ್ವಾಭಾವಿಕವಾಗಿಯೇ ಒಳಿತು ಮತ್ತು ಕೆಡುಕುಗಳಲ್ಲಿನ ವ್ಯತ್ಯಾಸವನ್ನು ಅರಿಯುತ್ತಾನೆ.

ii. ಪ್ರತಿಯೊಬ್ಬ ಮಾನವನೊಳಗೆ ಅಲ್ಲಾಹನು ನಫ್ಸುಲ್ಲವ್ವಾಮ (ಆತ್ಮಸಾಕ್ಷಿ) ಎಂಬುದನ್ನು ಇರಿಸಿ ಬಿಟ್ಟಿದ್ದಾನೆ. ಅದು ಮಾಡಲು ಹೊರಡುವ ಅಥವಾ ಮಾಡಿಬಿಟ್ಟ ಕೆಡುಕುಗಳನ್ನು ಪ್ರತಿಯೊಂದು ಸಂದರ್ಭದಲ್ಲೂ ಅವನನ್ನು ಟೀಕಿಸುತ್ತದೆ.

iii. ಮಾನವನ ಸ್ವಂತ ಅಸ್ತಿತ್ವದಲ್ಲಿ ಮತ್ತು ಅವನ ಸುತ್ತ ಮುತ್ತಲಿರುವ ಭೂಮಿಯಿಂದ ಆಕಾಶದ ವರೆಗಿನ ಈ ಅಖಿಲ ವಿಶ್ವದಲ್ಲಿ ದೇವನ ಅಸ್ತಿತ್ವ, ಅವನ ಏಕತೆ, ಪರಲೋಕ ಮತ್ತು ಪುನರುತ್ಥಾನವನ್ನು ಸಾಬೀತು ಪಡಿಸುವಂತಹ ಅಪಾರ ದೃಷ್ಟಾಂತಗಳು ಹಬ್ಬಿಕೊಂಡಿವೆ.

iv. ಅಪರಾಧಕ್ಕೆ ಶಿಕ್ಷೆಯೂ ಉತ್ತಮ ಸೇವೆಗಳಿಗೆ ಪುರಸ್ಕಾರವೂ ಸಿಗಲೇಬೇಕೆಂಬುದು ಮಾನವನ ಬುದ್ಧಿ ಮತ್ತು ಅವನ ಪ್ರಕೃತಿಯ ಖಚಿತ ತೀರ್ಮಾನವಾಗಿದೆ. ಈ ಲೋಕದಲ್ಲಿ ತಕ್ಕ ಶಿಕ್ಷೆಯಂತಿರಲಿ, ಯಾವ ಶಿಕ್ಷೆಯನ್ನೂ ಕೊಡಲು ಸಾಧ್ಯವಾಗದಂತಹ ಅಸಂಖ್ಯ ಅಪರಾಧ ಕೃತ್ಯಗಳು ನಡೆಯುತ್ತವೆ. ಹಾಗೆಯೇ ಅದೆಷ್ಟೋ ಸೇವಾ ಕಾರ್ಯಗಳನ್ನು ಮಾಡಿದವರಿಗೂ ಅದರ ಪೂರ್ಣ ಪ್ರತಿಫಲವಂತಿರಲಿ, ಯಾವ ಪ್ರತಿಫಲವೂ ಸಿಗಲು ಸಾಧ್ಯವಾಗದೇ ಇರುವುದುಂಟು. ಇದು ನಿಜವೆಂದಾದರೆ ಇವೆಲ್ಲದಕ್ಕೂ ಪೂರ್ಣ ಫಲ ಸಿಗುವಂತಹ ಒಂದು ಲೋಕ ಅರ್ಥಾತ್ ಪರಲೋಕವೊಂದು ಇರಬೇಕಾದುದು ಅನಿವಾರ್ಯವಾಗುತ್ತದೆ.

9. ಅರ್ಥಾತ್, ನಕ್ಷತ್ರಗಳ ಮೂಲಕ ನೀವು ನಿಶಾಂಧಕಾರದಲ್ಲೂ ನಿಮ್ಮ ದಾರಿಯನ್ನು ಕಂಡುಕೊಳ್ಳಲು ಸಾಧ್ಯವಾಗುವ ರೀತಿಯಲ್ಲಿ ವ್ಯವಸ್ಥೆ ಮಾಡಿರುವುದು, ನೆಲ ಜಲಗಳ ಪ್ರಯಾಣದಲ್ಲಿ ಮನುಷ್ಯನು ತನ್ನ ಪ್ರಯಾಣದ ದಿಕ್ಕನ್ನೂ ಗುರಿಯ ಕಡೆಗೆ ತನ್ನ ದಾರಿಯನ್ನೂ ಗುರುತಿಸಿಕೊಳ್ಳಲು ಸಾಧ್ಯವಾಗುವಂತೆ ಏರ್ಪಾಟು ಮಾಡಿರುವುದು ಕೂಡ ಅಲ್ಲಾಹನ ಯುಕ್ತಿಪೂರ್ಣ ಯೋಜನೆಗಳಲ್ಲೊಂದಾಗಿದೆ.

10. ಕೃಪೆಯೆಂದರೆ ಮಳೆ, ಅದು ಬರುವುದಕ್ಕೆ ಮುಂಚೆ ಮಾರುತಗಳು ಅದು ಬರುವ ಮುನ್ಸೂಚನೆ ನೀಡುತ್ತವೆ.

11. ಅರ್ಥಾತ್, ಈ ಸೂಕ್ತವು ಹ. ಯೂಸುಫ್‌ರವರು(ಅ) ತಮ್ಮ ಜೀವನದಲ್ಲಿ ಬಂದ ಅನೇಕ ಆಪತ್ತುಗಳು ಹಾಗೂ ಏರುಪೇರುಗಳ ನಂತರ ಜಗದೊಡೆಯನಾದ ಅಲ್ಲಾಹನೊಡನೆ ಮಾಡುವ ಪ್ರಾರ್ಥನೆಯಾಗಿದೆ. ಹ. ಯೂಸುಫ್‌ರ(ಅ) ಬಾಯಿಯಿಂದ ಈ ಸಂದರ್ಭದಲ್ಲಿ ಹೊರಟ ಈ ಮಾತುಗಳು ನಮ್ಮ ಮುಂದೆ ಓರ್ವ ನೈಜ ಮುಸ್ಲಿಮನ ಚಾರಿತ್ರ್ಯದ ಒಂದು ವಿಚಿತ್ರ

ಹಾಗೂ ಆಕರ್ಷಣೀಯ ಚಿತ್ರಣವನ್ನು ಇಡುತ್ತದೆ. (ಅವರು ಜೀವನದ ಅಸಾಧಾರಣವಾದ ಏರಿಳಿತಗಳಿಂದ ಸಾಗುತ್ತಾ) ಕಟ್ಟಕಡೆಗೆ ಲೌಕಿಕ ಉನ್ನತಿಯ ಶಿಖರಕ್ಕೆ ತಲುಪಿ ಬಿಟ್ಟರು. ಅವರನ್ನು ಕೊಂದು ಹಾಕಿ ಬಿಡಬೇಕೆಂದು ಯತ್ನಿಸಿದ ಅವರ ಮತ್ಸರಿ ಸಹೋದರರೆಲ್ಲ ಇಂದು ಅವರ ರಾಜಸಿಂಹಾಸನದ ಮುಂದೆ ತಲೆ ತಗ್ಗಿಸಿ ನಿಂತಿದ್ದಾರೆ. ಈ ಸಂದರ್ಭವು ಲೋಕದ ಸಾಮಾನ್ಯ ರೂಢಿ ಪ್ರಕಾರ ಹೆಮ್ಮೆ ತೋರಿಸುವ, ಜಂಭ ಕೊಚ್ಚುವ, ದೋಷಾರೋಪಣೆಗೈಯುವ, ಚುಚ್ಚು ಮಾತುಗಳನ್ನಾಡುವ ಮತ್ತು ಮೂದಲಿಸುವ ಸಂದರ್ಭವಾಗಿತ್ತು. ಆದರೆ ಈ ನೈಜ ದೇವಭಕ್ತನು ಈ ಸಂದರ್ಭದಲ್ಲಿ ಬೇರೆಯೇ ಚಾರಿತ್ರ್ಯವನ್ನು ಪ್ರಕಟಿಸುತ್ತಾರೆ. ಅವರು ತಮ್ಮ ಈ ಉನ್ನತ ಸ್ಥಿತಿಯ ಬಗ್ಗೆ ಅಹಂಭಾವ ತೋರಿಸುವ ಬದಲಿಗೆ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸುತ್ತಾರೆ. ಅವರು ಆ ಮತ್ಸರಿ ಅಣ್ಣಂದಿರನ್ನು ದೂರುವ ಒಂದು ಶಬ್ದವನ್ನೂ ತನ್ನ ಬಾಯಿಯಿಂದ ಹೊರಡಿಸುವುದಿಲ್ಲ. ಅದರ ಬದಲಿಗೆ ಶೈತಾನನು ನನ್ನ ಮತ್ತು ಅವರ ನಡುವೆ ಕೇಡುಂಟು ಮಾಡಿ ಬಿಟ್ಟಿದ್ದಾನೆಂದೂ ತಾವೇ ಅವರ ಪರವಾಗಿ ಹೇಳುತ್ತಾರೆ. ಕೆಲವೇ ಮಾತುಗಳಲ್ಲಿ ಇದೆಲ್ಲವನ್ನೂ ಹೇಳಿದ ಬಳಿಕ ಅವರು ವಿವಶರಾಗಿ ತಮ್ಮ ಒಡೆಯನ ಮುಂದೆ ಬಾಗಿ ಬಿಡುತ್ತಾರೆ. (ಅವನ ಅಸಂಖ್ಯಾತ ಉಪಕಾರಗಳಿಗಾಗಿ) ಅವನಿಗೆ ಕೃತಜ್ಞತೆ ಸಲ್ಲಿಸುತ್ತಾರೆ. ಕೊನೆಗೆ ಅವನೊಡನೆ ಪ್ರಾರ್ಥಿಸುವಾಗಲೂ ಈ ಲೋಕದಲ್ಲಿ ನಾನು ಬದುಕಿರುವಾಗಲೂ ನಿನ್ನ ಆರಾಧನೆ ಮತ್ತು ದಾಸ್ಯದಲ್ಲೇ ಸ್ಥಿರವಾಗಿರುವಂತೆ ಮಾಡು ಮತ್ತು ಪರಲೋಕದಲ್ಲಿ ನನ್ನನ್ನು ಸಜ್ಜನದಾಸರೊಂದಿಗೆ ಸೇರಿಸು ಎಂದೇ ಪ್ರಾರ್ಥಿಸುತ್ತಾರೆ. ಇದು ಸಚ್ಚಾರಿತ್ರ್ಯದ ಅತ್ಯುನ್ನತ ಹಾಗೂ ಪರಿಶುದ್ಧ ಆದರ್ಶವಾಗಿದೆ.

12. ಅರ್ಥಾತ್, ಅಲ್ಲಾಹ್ ಕಲ್ಲುಹೃದಯವಂತನಲ್ಲ, ಕ್ರೂರಿಯಲ್ಲ, ತನ್ನ ದಾಸರಿಗೆ ವಿನಾ ಕಾರಣ ಶಿಕ್ಷೆ ಕೊಡಲು ಹಾಗೂ ಅವರನ್ನು ಹೊಡೆದು ಬಡಿದು ಸಂತೋಷ ಪಡಲು ಅವನಿಗೆ ತನ್ನ ಸೃಷ್ಟಿಯ ಮೇಲೆ ಇಂತಹ ದ್ವೇಷವೇನೂ ಇಲ್ಲ. ನೀವು ನಿಮ್ಮ ಉದ್ಧಟತನದಲ್ಲಿ ಹದಮೀರಿದಾಗ ಮತ್ತು ಗಲಭೆ-ಗೊಂದಲಗಳನ್ನು ತೊರೆಯದಿರುವಾಗ ಅವನು ಒಲ್ಲದ ಮನಸ್ಸಿನಿಂದ ನಿಮಗೆ ಶಿಕ್ಷೆ ಕೊಡುತ್ತಾನೆ. ನೀವು ಎಷ್ಟೇ ಅಪರಾಧಗಳನ್ನು ಮಾಡಿದ್ದರೂ ನಿಮ್ಮ ದುಷ್ಕರ್ಮಗಳಿಗಾಗಿ ಪಶ್ಚಾತ್ತಾಪ ಪಟ್ಟು ಅವನ ಕಡೆಗೆ ಮರಳಿದರೆ ಅವನ ಕೃಪಾಶಯ ನಿಮಗಾಗಿ ತೆರೆದಿರುವುದು. ಏಕೆಂದರೆ ತಾನು ಉಂಟು ಮಾಡಿದ ಸೃಷ್ಟಿಯ ಮೇಲೆ ಅವನಿಗೆ ಅಪಾರ ಪ್ರೇಮವಿದೆ.

ಪ್ರವಾದಿಯವರು(ಸ) ಈ ವಿಷಯವನ್ನು ಎರಡು ಉತ್ತಮ ಉದಾಹರಣೆಗಳ ಸಹಿತ ವಿವರಿಸುವರು.

ಒಂದು, ನಿಮ್ಮಲ್ಲೊಬ್ಬನ ಒಂಟೆಯು ಒಂದು ನಿರ್ಜಲ (ನೀರಿಲ್ಲದ) ಮರುಭೂಮಿಯಲ್ಲಿ ಕಳೆದು ಹೋಗಿದೆ. ಅವನ ಅನ್ನ ಪಾನೀಯ ಸಾಧನಗಳೆಲ್ಲವೂ ಆ ಒಂಟೆಯ ಮೇಲೆಯೇ ಇವೆ. ಅವನು ಅದನ್ನು ಎಲ್ಲೆಲ್ಲಾ ಹುಡುಕಿಯೂ ಸಿಗದೆ ನಿರಾಶನಾಗಿದ್ದಾನೆ. ಕೊನೆಗೆ ಇನ್ನು ಬದುಕುವ ಆಶೆಯನ್ನೇ ತೊರೆದು ಒಂದು ಮರದ ಕೆಳಗೆ ಮಲಗಿ ಬಿಟ್ಟಿದ್ದಾನೆ. ಹೀಗಿರುವಾಗ ಹಠಾತ್ತನೆ ಆ ಒಂಟೆಯು ಅವನ ಮುಂದೆ ಬಂದು ನಿಲ್ಲುತ್ತದೆ. ಆಗ ಅವನಿಗೆ ಎಷ್ಟು ಸಂತೋಷವಾಗುವುದೋ

ಅದಕ್ಕಿಂತಲೂ ಹೆಚ್ಚು ಸಂತೋಷವು ಅಲ್ಲಾಹನಿಗೆ ಅನೇಕ ಪಾಪಗಳನ್ನು ಮಾಡಿದ ತನ್ನ ಒಬ್ಬ ದಾಸನು ಪಶ್ಚಾತ್ತಾಪ ಪಟ್ಟು ತನ್ನೆಡೆಗೆ ಮರಳಿದಾಗ ಉಂಟಾಗುತ್ತದೆ.

ಎರಡನೆಯ ಉದಾಹರಣೆಯನ್ನು ಇಸ್ಲಾಮೀ ಸಾಮ್ರಾಜ್ಯದ ಎರಡನೆಯ ಖಲೀಫ ಉಮರ್(ರ) ಹೀಗೆ ನಿರೂಪಿಸುತ್ತಾರೆ, ಒಮ್ಮೆ ಪ್ರವಾದಿಯವರ(ಸ) ಮುಂದೆ ಕೆಲವು ಮಂದಿ ಸೆರೆಯಾಳುಗಳನ್ನು ತರಲಾಯ್ತು. ಅವರಲ್ಲಿ ಒಬ್ಬ ಮಹಿಳೆಯೂ ಇದ್ದಳು. ಅವಳ ಮೊಲೆ ಹಾಲನ್ನು ಕುಡಿಯುವ ಶಿಶು ಅವಳಿಂದ ತಪ್ಪಿಹೋಗಿತ್ತು. ಅವಳು ಮಾತೃಪ್ರೇಮ ಪರವಶಳಾಗಿ ಕಂಡ ಕಂಡ ಮಕ್ಕಳನ್ನು ಅಪ್ಪಿ ಹಿಡಿದು ಹಾಲುಣಿಸ ತೊಡಗುತ್ತಿದ್ದಳು. ಅವಳ ಈ ಅವಸ್ಥೆಯನ್ನು ಕಂಡ ಪ್ರವಾದಿಯವರು ನಮ್ಮೊಡನೆ- ಈ ತಾಯಿ ತನ್ನ ಮಗುವನ್ನು ತಾನೇ ಬೆಂಕಿಗೆ ಹಾಕಿ ಬಿಡುವಳೆಂದು ನೀವು ಎಣಿಸುತ್ತೀರಾ? ಎಂದು ಕೇಳಿದರು. ಅದಕ್ಕೆ ನಾವು ಎಷ್ಟು ಮಾತ್ರಕ್ಕೂ ಇಲ್ಲವೆನ್ನುತ್ತ ಸ್ವತಃ ಎಸೆಯುವ ಮಾತಂತಿರಲಿ, ಅದು ಬೀಳುವುದನ್ನು ಕಂಡಾಗ ಅದನ್ನು ರಕ್ಷಿಸಲು ಆಕೆ ಏನು ಬೇಕಾದರೂ ಮಾಡಲು ಸಿದ್ಧಳಾಗುವಳು ಎಂದೆವು. ಆಗ ಪ್ರವಾದಿಯವರು, 'ಅಲ್ಲಾಹನಿಗೆ ತನ್ನ ದಾಸನ ಮೇಲೆ ಈ ತಾಯಿಗೆ ತನ್ನ ಕಂದನ ಮೇಲಿರುವುದಕ್ಕಿಂತಲೂ ಎಷ್ಟೋ ಪಟ್ಟು ಹೆಚ್ಚು ದಯೆ ಇದೆ' ಎಂದರು.

ಚೆನ್ನಾಗಿ ವಿವೇಚಿಸುವಾಗ ಸ್ವತಃ ನಮಗೂ ಇದು ಅರ್ಥವಾಗುತ್ತದೆ. ಮಕ್ಕಳನ್ನು ಸಾಕಿ ಸಲಹಲು ಬೇಕಾದ ಪ್ರೇಮವನ್ನು ತಂದೆ ತಾಯಿಗಳ ಹೃದಯಗಳಲ್ಲಿ ಮೂಡಿಸಿದವನು ಅಲ್ಲಾಹನೇ ತಾನೆ. ಅಲ್ಲಾಹ್ ಹೆತ್ತವರಲ್ಲಿ ಈ ಪ್ರೇಮವನ್ನು ಸೃಷ್ಟಿ ಮಾಡದಿರುತ್ತಿದ್ದರೆ ಪ್ರತಿಯೊಬ್ಬನಿಗೂ ತನ್ನ ಮಕ್ಕಳಿಗಿಂತ ದೊಡ್ಡ ಶತ್ರುಗಳು ಬೇರಾರೂ ಇರುತ್ತಿರಲಿಲ್ಲ, ಏಕೆಂದರೆ ಆ ಮಕ್ಕಳಿಂದಾಗಿ ಅತಿ ಹೆಚ್ಚಾಗಿ ಸಂಕಟ ಅನುಭವಿಸುವವರು ಹೆತ್ತವರೆ. ಹೀಗಿರುತ್ತಾ ಈ ಮಾತೃ ಪ್ರೇಮ ಮತ್ತು ಪಿತೃ ವಾತ್ಸಲ್ಯಗಳನ್ನು ಸೃಷ್ಟಿ ಮಾಡಿರುವಂತಹ ಅಲ್ಲಾಹನಲ್ಲಿ ತನ್ನ ಸ್ವಂತ ಸೃಷ್ಟಿಯ ಮೇಲೆ ಅದೆಂತಹ ಅಗಾಧ ಪ್ರೇಮವಿರಬಹುದೆಂದು ಪ್ರತಿಯೊಬ್ಬನೂ ಊಹಿಸಬಲ್ಲನು.

13. ಇವು ಸತ್ಯವಿಶ್ವಾಸೀ ಸಮಾಜದ ಎರಡು ವೈಶಿಷ್ಟ್ಯಗಳು, ಇವುಗಳನ್ನು ಎರಡು ಸಂಕ್ಷಿಪ್ತ ನುಡಿಗಳಲ್ಲಿ ಹೇಳಿಬಿಡಲಾಗಿದೆ. ಮೊದಲನೆಯದು, ಆ ಸಮಾಜದ ವ್ಯಕ್ತಿಗಳು ಪರಸ್ಪರರಿಗೆ ಸಹನೆಯನ್ನು ಬೋಧಿಸುತ್ತಾರೆ. ಎರಡನೆಯದು, ಅವರು ಪರಸ್ಪರರಿಗೆ ದಯೆಯನ್ನು ಬೋಧಿಸುತ್ತಾರೆ. ಒಬ್ಬ ಸತ್ಯವಿಶ್ವಾಸಿಯ ಸಂಪೂರ್ಣ ಜೀವನವೇ ಸಹನೆಯ ಜೀವನವಾಗಿರುತ್ತವೆ. ಒಬ್ಬ ವ್ಯಕ್ತಿ ಸತ್ಯವಿಶ್ವಾಸದ ಮಾರ್ಗದಲ್ಲಿ ಕಾಲಿರಿಸಿದ ತಕ್ಷಣವೇ ಅವನ ಸಹನೆಯ ಪರೀಕ್ಷೆ ಆರಂಭವಾಗುತ್ತದೆ. ಅವನು ನಿರಂತರವಾಗಿ ತನ್ನ ಸ್ವಂತ ಆತ್ಮ ಮತ್ತು ಅದರ ಆಕಾಂಕ್ಷೆಗಳಿಂದ ತೊಡಗಿ ತನ್ನ ಪತ್ನಿ, ಮಕ್ಕಳು, ಕುಟುಂಬ, ತನ್ನ ಸಮಾಜ, ತನ್ನ ದೇಶ, ತನ್ನ ಜನಾಂಗ ಮತ್ತು ಜಗತ್ತಿನಾದ್ಯಂತ ಹಬ್ಬಿರುವಂತಹ ಜಿನ್ನ್ (ಯಕ್ಷ) ವರ್ಗದ ಮತ್ತು ಮಾನವ ವರ್ಗದ ಶೈತಾನರ ಪ್ರತಿರೋಧವನ್ನು ಎದುರಿಸಬೇಕಾಗುತ್ತದೆ. ಈ ಎಲ್ಲ ಪರಿಸ್ಥಿತಿಗಳಲ್ಲಿ ಸಹನೆಯ ಗುಣ ಮಾತ್ರವೇ ಮಾನವನನ್ನು ಅಚಂಚಲವಾಗಿ ಇರಿಸಬಲ್ಲುದು.

ಇನ್ನು ಕರುಣೆಯ ವಿಷಯ, ಇದು ಸತ್ಯವಿಶ್ವಾಸಿ ಸಮಾಜದ ವೈಶಿಷ್ಟ್ಯವಾಗಿರುತ್ತದೆ. ಅದು ಕಲ್ಲೆದೆಯವರ, ನಿರ್ದಯಿಗಳ ಮತ್ತು ಅಕ್ರಮಿಗಳ ಸಮಾಜವಾಗಿರುವುದಿಲ್ಲ, ಅದು ಮಾನವತೆಯ ಪಾಲಿಗೆ ದಯಾಳುಗಳೂ ವಾತ್ಸಲ್ಯಮಯಿಗಳೂ ಆಗಿರುವ ಮತ್ತು ಪರಸ್ಪರ ಅನುಕಂಪವುಳ್ಳವರೂ ಹಿತೈಷಿಗಳೂ ಆಗಿರುವವರ ಸಮಾಜವಾಗಿರುತ್ತದೆ. ವ್ಯಕ್ತಿಯೆಂಬ ನೆಲೆಯಲ್ಲೂ ಒಬ್ಬ ಸತ್ಯವಿಶ್ವಾಸಿಯು ಅಲ್ಲಾಹನ ಕರುಣೆಯ ಒಂದು ಪ್ರತಿಬಿಂಬದಂತಿರುತ್ತಾನೆ ಮತ್ತು ಒಂದು ಸಮೂಹವೆಂಬ ನೆಲೆಯಲ್ಲೂ ಸತ್ಯವಿಶ್ವಾಸಿಗಳ ಗುಂಪು ''ನಿಮ್ಮನ್ನು ಅಖಿಲ ವಿಶ್ವದ ಪಾಲಿಗೆ ಕರುಣೆಯಾಗಿ ಮಾತ್ರ ಕಳುಹಿಸಲಾಗಿದೆ'' ಎಂದು ಪ್ರಶಂಸಿಸಲ್ಪಟ್ಟ ಅಲ್ಲಾಹನ ಸಂದೇಶವಾಹಕರ ಪ್ರತಿನಿಧಿಯಾಗಿರುತ್ತದೆ. ಪ್ರವಾದಿಯವರು(ಸ) ತಮ್ಮ ಸಮುದಾಯದಲ್ಲಿ ಬೇರೆಲ್ಲಕ್ಕಿಂತಲೂ ಅಧಿಕವಾಗಿ ಬೆಳೆಸಿದ ಉನ್ನತ ನೈತಿಕ ಗುಣವು ಈ ಕರುಣೆಯೇ ಆಗಿದೆ. ಉದಾ: ಪ್ರವಾದಿ(ಸ) ಹೇಳಿದರು, ''ಮಾನವನ ಮೇಲೆ ಕರುಣೆ ತೋರದವರ ಮೇಲೆ ಅಲ್ಲಾಹನು ಕರುಣೆ ತೋರುವುದಿಲ್ಲ.'' ''ಭೂವಾಸಿಗಳ ಮೇಲೆ ಕರುಣೆ ತೋರಿರಿ, ಆಕಾಶದವನು ನಿಮ್ಮ ಮೇಲೆ ಕರುಣೆ ತೋರುವನು.''

14. ಅರ್ಥಾತ್, ಅಲ್ಲಾಹ್ ಇದ್ದಾನೋ ಇಲ್ಲವೋ? ಅಲ್ಲಾಹ್ ಒಬ್ಬನೋ ಅಥವಾ ಬೇರೆ ದೇವರೂ ಇದ್ದಾರೋ ಅವನ ಗುಣ ವಿಶೇಷತೆಗಳೇನು? ಅವು ಹೇಗಿವೆ? ಅವನ ಸಂಬಂಧ ತನ್ನ ಸೃಷ್ಟಿಯೊಂದಿಗೆ ಯಾವ ತರಹದ್ದು? ಎಂಬಿತ್ಯಾದಿ ವಿಷಮಗಳ ಕುರಿತು ಚರ್ಚಿಸುತ್ತಾರೆ ಮತ್ತು ಜಗಳವಾಡುತ್ತಾರೆ.



# 4. ಕರುಣಾಮಯಿಯಾದ ಪ್ರವಾದಿ

''(ಓ ಪೈಗಂಬರರೇ,) ನೀವು ಇವರ ಪಾಲಿಗೆ ಅತ್ಯಂತ ಸೌಮ್ಯ ಸ್ವಭಾವಿಯಾಗಿರುವುದು ಅಲ್ಲಾಹನ ಮಹಾ ಕೃಪೆಯಾಗಿದೆ. ನೀವು ಕಠಿಣ ಸ್ವಭಾವಿ ಮತ್ತು ಕಲ್ಲೆದೆಯವರಾಗಿರುತ್ತಿದ್ದರೆ ಇವರೆಲ್ಲರೂ ನಿಮ್ಮ ಸುತ್ತಮುತ್ತಲಿನಿಂದ ಚದುರಿ ಹೋಗುತ್ತಿದ್ದರು. ಇವರ ಪ್ರಮಾದಗಳನ್ನು ಕ್ಷಮಿಸಿರಿ, ಇವರ ಪಾಪ ವಿಮೋಚನೆಗಾಗಿ ಪ್ರಾರ್ಥಿಸಿರಿ ಮತ್ತು ಧರ್ಮದ ಕೆಲಸಗಳಲ್ಲಿ ಇವರೊಡನೆ ಸಮಾಲೋಚಿಸಿರಿ. ಆ ಬಳಿಕ, ಯಾವುದಾದರೊಂದು ಅಭಿಪ್ರಾಯದಲ್ಲಿ ನೀವು ದೃಢ ನಿರ್ಧಾರ ತಾಳಿದರೆ ಅಲ್ಲಾಹನ ಮೇಲೆ ಭರವಸೆಯಿಡಿರಿ. ಅಲ್ಲಾಹನ ಮೇಲೆಯೇ ಭರವಸೆಯಿಟ್ಟು ಕಾರ್ಯವೆಸಗುವವರನ್ನು ಅವನು ಪ್ರೀತಿಸುತ್ತಾನೆ.''

(ಪವಿತ್ರ ಕುರ್‌ಆನ್,3:159)

''(ಭೂಮಿಯಲ್ಲಿರುವವರೆಲ್ಲರೂ ಸತ್ಯವಿಶ್ವಾಸಿ ಮತ್ತು ಆಜ್ಞಾಪಾಲಕರೇ ಆಗಿರಬೇಕೆಂದು) ನಿಮ್ಮ ಪ್ರಭುವಿನ ವಿಧಿ ನಿಯಮವಿರುತ್ತಿದ್ದರೆ, ಭೂವಾಸಿಗಳೆಲ್ಲರೂ ವಿಶ್ವಾಸವಿಟ್ಟೇ ತೀರುತ್ತಿದ್ದರು.[1] ಹೀಗಿರುವಾಗ ಜನರೆಲ್ಲರೂ ಸತ್ಯವಿಶ್ವಾಸಿಗಳಾಗಬೇಕೆಂದು ನೀವು ಒತ್ತಾಯ ಪಡಿಸುವಿರಾ?[2]

(ಪವಿತ್ರ ಕುರ್‌ಆನ್,10:99)

''ಓ ಪೈಗಂಬರರೇ, ಯುಕ್ತಿ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗಕ್ಕೆ ಜನರನ್ನು ಆಹ್ವಾನಿಸಿರಿ ಮತ್ತು ಜನರೊಂದಿಗೆ ಅತ್ಯುತ್ತಮ ರೀತಿಯಿಂದ ವಾದಿಸಿರಿ. ಯಾರು ಅವನ ಮಾರ್ಗದಿಂದ ಭ್ರಷ್ಟನಾಗಿದ್ದಾನೆ ಮತ್ತು ಯಾರು ನೇರ ಮಾರ್ಗದಲ್ಲಿದ್ದಾನೆಂಬುದನ್ನು ನಿಮ್ಮ ಪ್ರಭುವೇ ಚೆನ್ನಾಗಿ ಬಲ್ಲನು.'' (ಪವಿತ್ರ ಕುರ್‌ಆನ್,16:125)

''ಪ್ರವಾದಿಗಳೇ, ನೀವಿಚ್ಛಿಸಿದವರಿಗೆ ಸನ್ಮಾರ್ಗ ನೀಡಲು ನಿಮ್ಮಿಂದಾಗದು. ಆದರೆ ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗ ನೀಡುತ್ತಾನೆ. ಅವನು ಸನ್ಮಾರ್ಗ ಸ್ವೀಕರಿಸುವವರನ್ನು ಚೆನ್ನಾಗಿ ಅರಿತಿರುತ್ತಾನೆ.[3]'' (ಪವಿತ್ರ ಕುರ್‌ಆನ್,25:56)

''(ಪೈಗಂಬರರೇ) ನಿಮಗೆ ಭೂಮಿ–ಆಕಾಶಗಳಿಂದ ಜೀವನಾಧಾರ ಕೊಡುವವನಾರೆಂದು ಇವರೊಡನೆ ಕೇಳಿರಿ. ಹೇಳಿರಿ 'ಅಲ್ಲಾಹ್. ಈಗ ನಿಶ್ಚಯವಾಗಿಯೂ ನಮ್ಮ ಮತ್ತು ನಿಮ್ಮ ಪೈಕಿ ಕೇವಲ ಒಬ್ಬನೇ ಸನ್ಮಾರ್ಗದಲ್ಲಿದ್ದಾನೆ ಅಥವಾ ಸುವ್ಯಕ್ತ ಪಥಭ್ರಷ್ಟತೆಯಲ್ಲಿದ್ದಾನೆ.[4]''

(ಪವಿತ್ರ ಕುರ್‌ಆನ್,34:24)

''ಆದುದರಿಂದ ಸಂದೇಶವಾಹಕರೇ! ನೀವಿನ್ನು ಅದೇ ಧರ್ಮದ ಕಡೆಗೆ ಕರೆ ನೀಡಿರಿ ಮತ್ತು ನಿಮಗೆ ಆಜ್ಞಾಪಿಸಲಾಗಿರುವ ಪ್ರಕಾರ ಅದರಲ್ಲೇ ಸ್ಥಿರವಾಗಿರಿ. ಇವರ ಇಚ್ಛೆಗಳನ್ನು

ಅನುಸರಿಸಬೇಡಿರಿ ಮತ್ತು ಇವರೊಡನೆ (ಹೀಗೆ) ಹೇಳಿರಿ 'ಅಲ್ಲಾಹನು ಅವತೀರ್ಣಗೊಳಿಸಿದ ಪ್ರತಿಯೊಂದು ಗ್ರಂಥದ ಮೇಲೆ ನಾನು ವಿಶ್ವಾಸವಿರಿಸಿದೆನು. ನಿಮ್ಮ ನಡುವೆ ನ್ಯಾಯ ಪಾಲಿಸಬೇಕೆಂದು ನನಗೆ ಆದೇಶಿಸಲಾಗಿದೆ. ಅಲ್ಲಾಹನೇ ನಮ್ಮ ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ...'' (ಪವಿತ್ರ ಕುರ್‌ಆನ್,42:15)

''ಸರಿ! (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾ ಸಾಗಿರಿ. ನೀವು ಕೇವಲ ಉಪದೇಶಕರು.'' (ಪವಿತ್ರ ಕುರ್‌ಆನ್,88:21)

''ಸ್ಪಷ್ಟವಾಗಿ (ಹೀಗೆ) ಹೇಳಿಬಿಡಿರಿ. ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ, ಇಷ್ಟವಿದ್ದವರು ನಿರಾಕರಿಸಲಿ.[5] (ನಿರಾಕರಿಸುವ) ಅಕ್ರಮಿಗಳಿಗೆ ನಾವು ಒಂದು ಅಗ್ನಿಯನ್ನು ಸಿದ್ಧಗೊಳಿಸಿಬಿಟ್ಟಿರುತ್ತೇವೆ. ಅದರ ಜ್ವಾಲೆಗಳು ಅವರನ್ನು ಆವರಿಸಿಕೊಂಡಿವೆ. ಅಲ್ಲಿ ಅವರು ನೀರು ಬೇಕೆಂದು ಕೇಳಿದಾಗ ಎಣ್ಣೆಯ ಮಡ್ಡಿಯಂತಹ ಹಾಗೂ ಬಾಯಿಯನ್ನು ಸುಟ್ಟು ಹಾಕುವಂತಹ ನೀರಿನಿಂದ ಅವರನ್ನು ಸತ್ಕರಿಸಲಾಗುವುದು. ಅತ್ಯಂತ ಕೆಟ್ಟ ಪೇಯವದು ಮತ್ತು ಅತಿಕೆಟ್ಟ ವಿಶ್ರಾಂತಿ ಗೃಹವದು.''(ಪವಿತ್ರ ಕುರ್‌ಆನ್,18:29)

''ಪೈಗಂಬರರೇ, ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ.[6]'' (ಪವಿತ್ರ ಕುರ್‌ಆನ್,21:107)

''ಹೇಳಿ ಬಿಡಿರಿ! ಓ, ಸತ್ಯನಿಷೇಧಿಗಳೇ,[7] ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ ಮತ್ತು ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ, ಮತ್ತು ನೀವು ಆರಾಧಿಸಿದವುಗಳ ಆರಾಧನೆಯನ್ನು ನಾನೂ ಮಾಡುವವನಲ್ಲ ನಾನು ಆರಾಧಿಸುವವನನ್ನು ನೀವೂ ಆರಾಧಿಸುವವರಲ್ಲ, ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ.''

(ಪವಿತ್ರ ಕುರ್‌ಆನ್,109:1–6)

## ಟಿಪ್ಪಣಿ:

1. ಅರ್ಥಾತ್, ಈ ಭೂಮಿಯಲ್ಲಿ ದೇವಧಿಕ್ಕಾರದ ಅಸ್ತಿತ್ವವೇ ಇರಬಾರದೆಂಬುದು ಅಲ್ಲಾಹನ ಇಚ್ಛೆಯಾಗಿರುತ್ತಿದ್ದರೆ ಅದಕ್ಕಾಗಿ ತನ್ನ ಸೃಜನ ಬಲವನ್ನು ಪ್ರಯೋಗಿಸಿ ಬಲಾತ್ಕಾರವಾಗಿ ಹಾಗೆ ಮಾಡಿಬಿಡುವುದೇನೂ ಅವನಿಗೆ ಕಷ್ಟ ಸಾಧ್ಯವಾಗಿರಲಿಲ್ಲ, ಆದರೆ ಅಲ್ಲಾಹನ ದೃಷ್ಟಿಯಲ್ಲಿ ಈ ಮಾನವ ವರ್ಗವನ್ನು ಸೃಷ್ಟಿಸುವ ಯುಕ್ತಿಪೂರ್ಣ ಉದ್ದೇಶಕ್ಕೆ ಈ ರೀತಿಯ ಬಲಾತ್ಕಾರ ದಿಂದಾಗಿ ಧಕ್ಕೆಯುಂಟಾಗುತ್ತಿತ್ತು. ಆದುದರಿಂದಲೇ ಅಲ್ಲಾಹನು ಸ್ವತಃ ಮಾನವನಿಗೆ ಸತ್ಯವಿಶ್ವಾಸ ಸ್ವೀಕರಿಸುವ ಅಥವಾ ನಿರಾಕರಿಸುವ ಮತ್ತು ಸತ್ಕರ್ಮವೆಸಗುವ ಅಥವಾ ಎಸಗದಿರುವ ಸ್ವಾತಂತ್ರ್ಯವನ್ನು ಕೊಟ್ಟಿರುತ್ತಾನೆ.

2. ಪ್ರವಾದಿವರ್ಯರು(ಸ) ಜನರನ್ನು ಬಲಾತ್ಕಾರವಾಗಿ ಸತ್ಯವಿಶ್ವಾಸಿಗಳನ್ನಾಗಿ ಮಾಡಲು ಬಯಸುತ್ತಿದ್ದರೆಂದೂ ಅಲ್ಲಾಹ್ ಹೀಗೆ ಮಾಡುವುದನ್ನು ತಡೆಯುತ್ತಿದ್ದನೆಂದೂ ಇದರ

ಅರ್ಥವಲ್ಲ, ಇಲ್ಲಿ ಈ ಅಭಿಸಂಬೋಧನೆಯು ತೋರಿಕೆಗೆ ಪ್ರವಾದಿ(ಸ)ಯವರಿಗಾದರೂ ವಿಷಯವು ವಾಸ್ತವದಲ್ಲಿ ಸತ್ಯದ ಆಹ್ವಾನವನ್ನು ನಿಷೇಧಿಸುವವರ ಕಡೆಗಿದೆ. ಈ ಮಾತಿನ ಇಂಗಿತವೇನೆಂದರೆ, ಹೇ ಜನರೇ! ಸನ್ಮಾರ್ಗ ಮತ್ತು ಪಥಭ್ರಷ್ಟತೆಗೊಳಗಾಗಿರುವ ವ್ಯತ್ಯಾಸವನ್ನು ಆಧಾರ ಪ್ರಮಾಣಗಳ ಸಹಿತ ವಿವರಿಸಿ ಹೇಳುವ ಹಾಗೂ ನೇರ ಮಾರ್ಗವನ್ನು ಸ್ಪಷ್ಟವಾಗಿ ತೋರಿಸಿ ಕೊಡಬೇಕಾದ ಕರ್ತವ್ಯವನ್ನು ನಮ್ಮ ಸಂದೇಶವಾಹಕರು ಸಂಪೂರ್ಣವಾಗಿ ನೆರವೇರಿಸುತ್ತಾರೆ. ಇನ್ನು ನೀವು ಸನ್ಮಾರ್ಗಿಗಳಾಗಲು ಇಷ್ಟಪಡದಿದ್ದರೆ ಹಾಗೂ ನೀವು ನೇರ ಮಾರ್ಗಕ್ಕೆ ಬರಬೇಕಾದರೆ ಯಾರಾದರೂ ನಿಮ್ಮನ್ನು ಬಲಾತ್ಕಾರವಾಗಿಯೇ ಸನ್ಮಾರ್ಗಕ್ಕೆ ತರಬೇಕೆಂದು ನೀವು ಹೇಳುವುದಾದರೆ ಅಲ್ಲಾಹನಿಗೆ ಇಂತಹ ಬಲಾತ್ಕಾರದ ವಿಶ್ವಾಸದ ಅಗತ್ಯವಿಲ್ಲ.

3. ಇದು ಪ್ರವಾದಿವರ್ಯರನ್ನು ಅಭಿಸಂಬೋಧಿಸಿ ಹೇಳಲಾಗಿದ್ದರೂ ಇದರ ಉದ್ದೇಶ ಮಕ್ಕಾದ ಸತ್ಯನಿಷೇಧಿಗಳನ್ನು ನಾಚಿಸುವುದಾಗಿತ್ತು. ''ಓ ಹತಭಾಗಿಗಳೇ, ನಿಮ್ಮ ಅವಸ್ಥೆಯ ಬಗ್ಗೆ ಶೋಕವನ್ನಾಚರಿಸಿರಿ, ಇತರರು ಎಲ್ಲಿಂದೆಲ್ಲ ಬಂದು ಈ ಸೌಭಾಗ್ಯದಿಂದ ಪ್ರಯೋಜನ ಪಡೆಯುತ್ತಿರುವಾಗ ನೀವು ನಿಮ್ಮ ಮನೆಯಲ್ಲೇ ಇರುವ ಪುಣ್ಯದ ಚಿಲುಮೆಯಿಂದ ವಂಚಿತರಾಗಿದ್ದೀರಿ'' ಎಂದು ಹೇಳಬೇಕಾಗಿತ್ತು. ಆದರೆ ಹೇಳುವಾಗ ''ಓ ಮುಹಮ್ಮದ್(ಸ) ನೀವು ಈ ಅಮೃತದಿಂದ ನಿಮ್ಮ ಜನಾಂಗದವರೂ ನಿಮ್ಮ ಸಂಬಂಧಿಕರೂ ನಿಮ್ಮ ಆಪ್ತೇಷ್ಟರೂ ಫಲಪಡೆಯಬೇಕೆಂದು ಇಚ್ಛಿಸುತ್ತೀರಿ. ಆದರೆ ನಿಮ್ಮ ಇಚ್ಛೆಯಿಂದೇನಾಗುತ್ತದೆ? ಸನ್ಮಾರ್ಗದರ್ಶನ ಅಲ್ಲಾಹನ ಅಧಿಕಾರದಲ್ಲಿದೆ. ಅವನು ಈ ಅನುಗ್ರಹವನ್ನು ಸನ್ಮಾರ್ಗ ಸ್ವೀಕಾರದ ಆಸಕ್ತಿ ಯಾರಲ್ಲಿ ಕಂಡು ಬರುತ್ತದೋ ಅಂತಹವರಿಗೆ ಮಾತ್ರ ಪ್ರದಾನ ಮಾಡುತ್ತಾನೆ. ನಿಮ್ಮ ಸಂಬಂಧಿಕರಲ್ಲಿ ಈ ವಿಶೇಷತೆ ಇಲ್ಲದಿರುವಾಗ ಅವರಿಗೆ ಈ ಸೌಭಾಗ್ಯ ಸಿಗುವುದಾದರೂ ಹೇಗೆ ಎಂಬ ಧಾಟಿಯಲ್ಲಿ ಹೇಳಲಾಗಿದೆ.

4. ಅರ್ಥಾತ್, ನಾವು ಜೀವನಾಧಾರ ನೀಡುವವನನ್ನೇ ಆರಾಧ್ಯನೆಂದು ನಂಬುತ್ತೇವೆ. ನೀವು ಜೀವನಾಧಾರ ಕೊಡದಿರುವವರನ್ನು ಆರಾಧ್ಯರೆಂದು ನಂಬುತ್ತೀರಿ. ನಮ್ಮ ಮತ್ತು ನಿಮ್ಮ ನಡುವಿನ ಈ ವ್ಯತ್ಯಾಸವು ವ್ಯಕ್ತವಾಗಿ ಬಿಟ್ಟಿತು. ಈಗ ನಾವಿಬ್ಬರೂ ಏಕಕಾಲದಲ್ಲಿ ಸನ್ಮಾರ್ಗಗಳಾಗಿರುವುದು ಹೇಗೆ? ಈ ಸುವ್ಯಕ್ತ ಅಂತರದ ಪ್ರಕಾರ ನಮ್ಮ ಪೈಕಿ ಒಂದು ಕಡೆಯವರು ಮಾತ್ರ ಸನ್ಮಾರ್ಗಿಗಳಾಗಿರಲು ಸಾಧ್ಯ. ಇನ್ನೊಂದು ಕಡೆಯವರು ಪಥಭ್ರಷ್ಟರು. ಈಗ ಯಾರು ತರ್ಕಬದ್ಧವಾಗಿ ಸನ್ಮಾರ್ಗಿಗಳು ಮತ್ತು ಯಾರು ಪಥಭ್ರಷ್ಟರೆಂಬುದನ್ನು ನೀವೇ ಯೋಚಿಸಿರಿ.

5. ಈ ಅಧ್ಯಾಯದಲ್ಲಿ ಗುಹಾವಾಸಿಗಳ ಕಥೆ ಹೇಳಿದ ಬಳಿಕ ಇದನ್ನು ಹೇಳಿರುವ ಉದ್ದೇಶವೇನೆಂದರೆ, ಏಕದೇವ ವಿಶ್ವಾಸ ಸ್ವೀಕಾರದ ಬಳಿಕ ಅವರು ಹೇಗೆ ಎದ್ದು ''ಭೂಮಿ ಆಕಾಶಗಳ ಪ್ರಭುವೇ ನಮ್ಮ ಪ್ರಭು'' ಎಂದು ಘೋಷಿಸಿದರು ಹಾಗೂ ಯಾವ ರೀತಿಯಲ್ಲಿ ತಮ್ಮ ಪಥಭ್ರಷ್ಟ ಜನಾಂಗದೊಂದಿಗೆ ಯಾವ ತರದ ಸಂಧಾನಕ್ಕೂ ಸಿದ್ಧರಾಗದೇ ಸಂಪೂರ್ಣ

ದೃಢತೆಯಿಂದ ''ನಾವು ಅವನ ಹೊರತು ಇನ್ನಾರನ್ನೂ ಆರಾಧನೆಗೆ ಅರ್ಹರೆಂದು ಕರೆಯಲಾರೆವು. ನಾವು ಹಾಗೆ ಮಾಡಿಬಿಟ್ಟರೆ ನಾವು ಮಹಾ ಅನುಚಿತ ಮಾತನ್ನಾಡಿದಂತಾಗುವುದು'' ಎಂದು ಹೇಳಿದರು. ಈ ಘಟನೆಯನ್ನು ಪ್ರಸ್ತಾಪಿಸಿದ ಬಳಿಕ ಪ್ರವಾದಿಯವರನ್ನು ಅಭಿಸಂಬೋಧಿಸಿ ಮತ್ತು ವಾಸ್ತವದಲ್ಲಿ ಇಸ್ಲಾಮಿನ ಶತ್ರುಗಳಿಗೆ ಕೇಳಿಸುವ ಉದ್ದೇಶದಿಂದ- ಈ ಬಹುದೇವ ವಿಶ್ವಾಸಿಗಳೊಂದಿಗೆ ಮತ್ತು ಸತ್ಯನಿಷೇಧಿಗಳೊಂದಿಗೆ ಸಂಧಾನದ ಪ್ರಶ್ನೆಯೇ ಇಲ್ಲ, ಅಲ್ಲಾಹನ ಕಡೆಯಿಂದ ಬಂದ ಸತ್ಯವನ್ನು ಇದ್ದಕ್ಕಿದ್ದಂತೆ ಅವರ ಮುಂದೆ ಸಾರಿಬಿಡಿರಿ. ಸ್ವೀಕರಿಸುವುದಿದ್ದರೆ ಸ್ವೀಕರಿಸಲಿ. ಸ್ವೀಕರಿಸದಿದ್ದರೆ ಅದರ ದುಷ್ಪರಿಣಾಮವನ್ನು ಅವರೇ ಕಂಡುಕೊಳ್ಳುವರು. ಇನ್ನು, ಅದನ್ನು ಸ್ವೀಕರಿಸಿದವರು ಎಳೆಯ ಪ್ರಾಯದ ತರುಣರಿರಲಿ, ಸ್ಥಿತಿವಂತರಲ್ಲದ ದರಿದ್ರರಿರಲಿ, ಗುಲಾಮರಿರಲಿ, ಕೂಲಿಯಾಳುಗಳಿರಲಿ, ಯಾರೇ ಆಗಿದ್ದರೂ ಇವರೇ ಅಮೂಲ್ಯ ರತ್ನಗಳಾಗಿರುತ್ತಾರೆ. ಇವರನ್ನೇ ಇಲ್ಲಿ ಆಪ್ತರೆಂದು ಪರಿಗಣಿಸಲಾಗುವುದು. ಇವರನ್ನು ಬಿಟ್ಟು ಆ ದೊಡ್ಡ ದೊಡ್ಡ ಸರದಾರರನ್ನೂ ಧನಾಢ್ಯರನ್ನೂ ಗಣನೆಗೆ ತೆಗೆದುಕೊಳ್ಳಲಾಗದು. ಅವರು ಲೌಕಿಕ ಸುಖಾಡಂಬರಗಳನ್ನಷ್ಟೇ ಹೊಂದಿದ್ದರೂ ಅವರು ಅಲ್ಲಾಹನನ್ನು ಮರೆತು ತಮ್ಮ ಸ್ವಂತ ಚಿತ್ತಾಂಕಾಂಕ್ಷೆಗಳ ದಾಸರಾಗಿ ಬಿಟ್ಟಿದ್ದಾರೆ.

6. ಇದನ್ನು ನಾವು ನಿಮ್ಮನ್ನು ಜಗತ್ತಿನವರಿಗೆ ಅನುಗ್ರಹವಾಗಿಯೇ ಕಳುಹಿಸಿದ್ದೇವೆ ಎಂದೂ ಅನುವಾದಿಸಬಹುದು. ಎರಡೂ ರೂಪದಲ್ಲಿ ತಾತ್ಪರ್ಯವೇನೆಂದರೆ, ಪ್ರವಾದಿಯವರ(ಸ) ಪ್ರವಾದಿತ್ವವು ವಾಸ್ತವದಲ್ಲಿ ಮಾನವ ವರ್ಗಕ್ಕೆ ದೇವಾನುಗ್ರಹ ಮತ್ತು ಕೃಪೆಯಾಗಿದೆ. ಏಕೆಂದರೆ ಅವರು ಬಂದು ಅನಾಸ್ಥೆಯಲ್ಲಿ ಬಿದ್ದಿದ್ದ ಜಗತ್ತನ್ನು ಬಡಿದೆಬ್ಬಿಸಿದರು. ಅದಕ್ಕೆ ಸತ್ಯಾಸತ್ಯಗಳ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸಿ ಕೊಡುವಂತಹ ಜ್ಞಾನವನ್ನು ಕಲಿಸಿಕೊಟ್ಟರು ಹಾಗೂ ವಿನಾಶದ ದಾರಿ ಯಾವುದು ಮತ್ತು ಶಾಂತಿಯ ಮಾರ್ಗ ಯಾವುದೆಂದು ಸಂದೇಹಾತೀತ ರೀತಿಯಲ್ಲಿ ತಿಳಿಯಪಡಿಸಿದರು. ಮಕ್ಕಾದ ಸತ್ಯನಿಷೇಧಿಗಳು ಪ್ರವಾದಿಯವರ(ಸ) ಪ್ರವಾದಿತ್ವವನ್ನು ತಮ್ಮ ಮಟ್ಟಿಗೆ ಕಾಟವೆಂದೂ ಸಂಕಷ್ಟವೆಂದೂ ತಿಳಿದುಕೊಂಡು, ಈ ವ್ಯಕ್ತಿ ನಮ್ಮ ಜನಾಂಗದೊಳಗೆ ಒಡಕನ್ನುಂಟು ಮಾಡಿದ್ದಾನೆಂದು ಹೇಳುತ್ತಿದ್ದರು. ಆದ್ದರಿಂದ ತಿಳಿಗೇಡಿಗಳೇ ನೀವು ಯಾರನ್ನು ಕಾಟವೆಂದು ತಿಳಿದುಕೊಂಡಿರುವಿರೋ ಅವರು ವಾಸ್ತವದಲ್ಲಿ ನಿಮಗೆ ಅಲ್ಲಾಹನ ಅನುಗ್ರಹವಾಗಿದ್ದಾರೆ ಎಂದು ಹೇಳಲಾಗಿದೆ.

7. ಈ ಸೂಕ್ತದಲ್ಲಿ ಕೆಲವೊಂದು ವಿಷಯಗಳು ಗಮನಾರ್ಹವಾಗಿವೆ-

i. ಕುಲ್(ಹೇಳಿರಿ) ಎಂಬ ಪದದ ಪ್ರಥಮ ಅಭಿಸಂಬೋಧಿತರು ಪ್ರವಾದಿಯವರೇ(ಸ) ಆಗಿದ್ದಾರೆ. ಆದರೆ ಈ ಆದೇಶ ಅವರೊಬ್ಬರಿಗೆ ಮಾತ್ರ ಸೀಮಿತವಾಗಿರದೇ ಅವರ ಮೂಲಕ ಪ್ರತಿಯೊಬ್ಬ ವಿಶ್ವಾಸಿಗೂ ತಲುಪುತ್ತದೆ.

ii. ಕಾಫಿರ್ (ಸತ್ಯನಿಷೇಧಿ) ಎಂಬ ಪದವು ಒಂದು ಬೈಗುಳವಲ್ಲ, ಬಹುತೇಕ ಮುಸ್ಲಿಮೇತರರ ತಪ್ಪುಧಾರಣೆಗೆ ಈಡಾಗಿರುವ ಒಂದು ಪದವಾಗಿದೆಯಿದು. ಇಲ್ಲಿ

ಮುಸ್ಲಿಮೇತರರನ್ನು ಕಾಫಿರ್ ಎಂದು ಹೇಳಲಾಗಿಲ್ಲ. ಕಾಫಿರ್ ಎಂದರೆ ಸತ್ಯವನ್ನು ನಿರಾಕರಿಸುವವನು ಎಂದಾಗಿದೆ. ಆದುದರಿಂದ ಅಲ್ಲಾಹನ ಆಜ್ಞೆಯ ಪ್ರಕಾರ ಪ್ರವಾದಿಯವರು(ಸ) ''ಓ ಸತ್ಯನಿಷೇಧಿಗಳೇ'' ಎಂದು ಹೇಳುವುದರ ಅರ್ಥ, ''ನನ್ನ ಪ್ರವಾದಿತ್ವ ಮತ್ತು ನನಗೆ ಅವತೀರ್ಣವಾದ ಬೋಧನೆಗಳನ್ನು ಒಪ್ಪಿಕೊಳ್ಳಲು ನಿರಾಕರಿಸುವವರೇ'' ಎಂದಾಗುತ್ತದೆ.

iii. ಇಲ್ಲಿ ಓ ಸತ್ಯನಿಷೇಧಿಗಳೇ ಎಂದು ಹೇಳಲಾಗಿದೆ, ಓ ಮುಶ್ರಿಕರೇ ಅಥವಾ ಓ ಬಹು ದೇವಾರಾಧಕರೇ ಎನ್ನಲಾಗಿಲ್ಲ. ಪ್ರವಾದಿ ಮುಹಮ್ಮದರು(ಸ) ಅಲ್ಲಾಹನ ಸಂದೇಶವಾಹಕರು ಹಾಗೂ ಅವರು ಮುಂದಿಡುತ್ತಿರುವ ಬೋಧನೆಗಳು ಅಲ್ಲಾಹನ ವತಿಯಿಂದಾಗಿದೆ ಎಂದು ಒಪ್ಪದೇ ಇರುವವರು ಯಾರೇ ಆದರೂ ಅವರು ಇದರ ಅಭಿಸಂಬೋಧಿತರಾಗಿದ್ದಾರೆ.



# 5. ಶತ್ರುವಿಗೂ ಅಭಯ ನೀಡಿರಿ

''ಬಹುದೇವವಿಶ್ವಾಸಿಗಳ ಪೈಕಿ ಯಾರಾದರೂ (ಅಲ್ಲಾಹನ ವಾಣಿಯನ್ನಾಲಿಸಲಿಕ್ಕಾಗಿ) ನಿಮ್ಮೊಡನೆ ಅಭಯ ಯಾಚಿಸಿ ನಿಮ್ಮ ಬಳಿಗೆ ಬರಲಿಚ್ಛಿಸಿದರೆ ಅಲ್ಲಾಹನ ವಚನವನ್ನು ಅವನು ಆಲಿಸಿ ಕೊಳ್ಳುವವರೆಗೆ ಅವನಿಗೆ ಅಭಯ ನೀಡಿರಿ. ಅನಂತರ ಅವನನ್ನು ಅವನ ಸುರಕ್ಷಾಸ್ಥಾನಕ್ಕೆ ತಲುಪಿಸಿಬಿಡಿರಿ. ಅವರು ತಿಳುವಳಿಕೆಯಿಲ್ಲದವರಾದುದರಿಂದ ಹೀಗೆ ಮಾಡಬೇಕಾಗಿದೆ.''

(ಪವಿತ್ರ ಕುರ್‌ಆನ್,9:6)

**ಟಿಪ್ಪಣಿ:**

ಅರ್ಥಾತ್, ಯುದ್ಧನಡೆಯುತ್ತಿರುವ ವೇಳೆ ಒಬ್ಬ ಶತ್ರು ನಿಮ್ಮೊಡನೆ ನಾನು ಇಸ್ಲಾಮನ್ನು ತಿಳಿಯಬಯಸುತ್ತೇನೆ ಎಂದು ಹೇಳಿದರೆ ಮುಸ್ಲಿಮರು ಅವನಿಗೆ ಅಭಯ ಕೊಟ್ಟು ತಮ್ಮಲ್ಲಿಗೆ ಬರಲು ಅನುವು ಮಾಡಿಕೊಡಬೇಕು ಮತ್ತು ಅವನಿಗೆ ಸರಿಯಾದ ಬೋಧನೆ ನೀಡಬೇಕು. ಅವನು ಸ್ವೀಕರಿಸದೇ ಹೋದರೆ ಅವನನ್ನು ತಮ್ಮ ರಕ್ಷಣೆಯಲ್ಲೇ ಅವನ ವಾಸಸ್ಥಳಕ್ಕೆ ತಲುಪಿಸಬೇಕು.



# 6. ಅನ್ಯಧರ್ಮೀಯರ ದೇವರುಗಳನ್ನು ಅಪಹಾಸ್ಯ ಮಾಡಬೇಡಿರಿ

''(ಓ ಮುಸ್ಲಿಮರೇ,) ಅವರು ಅಲ್ಲಾಹನ ಹೊರತು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರನ್ನು ತೆಗಳಬೇಡಿರಿ. ಇದರಿಂದ ಅವರು 'ಬಹುದೇವಾರಾಧನೆ'ಗಿಂತಲೂ ಮುಂದುವರಿದು ಅಜ್ಞಾನ ದಿಂದ ಅಲ್ಲಾಹನನ್ನು ತೆಗಳತೊಡಗುವರು. ನಾವು ಇದೇ ರೀತಿಯಲ್ಲಿ ಪ್ರತಿಯೊಂದು ಸಮುದಾಯಕ್ಕೆ ಅದರ ಕರ್ಮವನ್ನು ಚೆಲುವಾಗಿಸಿದ್ದೇವೆ. ಅನಂತರ ಅವರಿಗೆ ತಮ್ಮ ಪ್ರಭುವಿನ ಕಡೆಗೇ ಮರಳಿ ಸಾಗಲಿಕ್ಕಿದೆ. ಆಗ ಅವನು ಅವರೇನು ಮಾಡುತ್ತಿದ್ದರೆಂಬುದನ್ನು ಅವರಿಗೆ ತೋರಿಸಿಕೊಡುವನು.'' (ಪವಿತ್ರ ಕುರ್‌ಆನ್,6:108)

**ಟಿಪ್ಪಣಿ:**

ಅರ್ಥಾತ್, ತಮ್ಮ ಧರ್ಮಾಹ್ವಾನ ಕಾರ್ಯದ ಆವೇಶದಲ್ಲಿ ವಾದ-ವಿವಾದ, ತರ್ಕ ಕೂಟಗಳಲ್ಲಿ ಬಿದ್ದು ಮುಸ್ಲಿಮೇತರರ ವಿಶ್ವಾಸಗಳ ಮೇಲೆ ಆಕ್ರಮಣ ನಡೆಸುವ ಮತ್ತು ಅವರ ಮಹಾ ಪುರುಷರನ್ನೂ, ಆರಾಧ್ಯರನ್ನೂ ನಿಂದಿಸುವಲ್ಲಿಯ ವರೆಗೆ ಮುಂದುವರಿಯಬಾರದು, ಏಕೆಂದರೆ ಈ ವರ್ತನೆಯು ಅವರನ್ನು ಹತ್ತಿರಕ್ಕೆ ತರುವ ಬದಲಿಗೆ ಇನ್ನಷ್ಟು ದೂರಕ್ಕೆ ಒಯ್ಯುವುದು- ಎಂದು ಪ್ರವಾದಿಯವರು ಅನುಯಾಯಿಗಳಿಗೆ ನೀಡಿದ ಉಪದೇಶವಾಗಿದೆ.



# 7. ಮಾನವ ಐಕ್ಯ

''ಈ ನಿಮ್ಮ ಸಮುದಾಯವು ವಾಸ್ತವದಲ್ಲಿ ಒಂದೇ ಸಮುದಾಯವಾಗಿದೆ ಮತ್ತು ನಾನು ನಿಮ್ಮ ಪ್ರಭುವಾಗಿದ್ದೇನೆ. ಆದುದರಿಂದ ನೀವು ನನ್ನ ದಾಸ್ಯ-ಆರಾಧನೆ ಮಾಡಿರಿ.''

(ಪವಿತ್ರ ಕುರ್‌ಆನ್,21:92)

''ಆರಂಭದಲ್ಲಿ ಜನರೆಲ್ಲರೂ ಒಂದೇ ಸಂಪ್ರದಾಯದವರಾಗಿದ್ದರು. (ಈ ಸ್ಥಿತಿ ಬಹುಕಾಲ ಉಳಿಯಲಿಲ್ಲ, ಅವರೊಳಗೆ ಭಿನ್ನಾಭಿಪ್ರಾಯಗಳುಂಟಾದುವು) ಆಗ ಅಲ್ಲಾಹನು ಸತ್ಯಮಾರ್ಗದ ಬಗ್ಗೆ ಸುವಾರ್ತೆ ನೀಡುವವರೂ ಮಿಥ್ಯಮಾರ್ಗದ ಬಗ್ಗೆ ಎಚ್ಚರಿಕೆ ಕೊಡುವವರೂ ಆದ ಪ್ರವಾದಿಗಳನ್ನು ರವಾನಿಸಿದನು ಮತ್ತು ಅವರೊಂದಿಗೆ, ಸತ್ಯದ ವಿಷಯದಲ್ಲಿ ಜನರಲ್ಲುಂಟಾಗಿದ್ದ ಭಿನ್ನಾಭಿಪ್ರಾಯಗಳ ಬಗ್ಗೆ ತೀರ್ಪು ನೀಡಲಿಕ್ಕಾಗಿ ಪರಮಸತ್ಯ ಗ್ರಂಥವನ್ನು ಇಳಿಸಿದನು. (ಪ್ರಾರಂಭದಲ್ಲಿ ಜನರಿಗೆ ಸತ್ಯವನ್ನು ತೋರಿಸಿಕೊಡದಿದ್ದುದರಿಂದೇನೂ ಅವರಲ್ಲಿ ಈ ತರದ ಭಿನ್ನಾಭಿಪ್ರಾಯಗಳು ತಲೆದೋರಿದುದಲ್ಲ, ನಿಜವಾಗಿ) ಸತ್ಯದ ಶಿಕ್ಷಣ ಕೊಡಲ್ಪಟ್ಟವರೇ ಈ ಅಭಿಪ್ರಾಯ ಭೇದಗಳನ್ನುಂಟು ಮಾಡಿದರು. ಅವರು ಕೇವಲ ಪರಸ್ಪರ ಅತಿರೇಕ ನಡೆಸಲು ಇಷ್ಟಪಡುತ್ತಿದ್ದುದರಿಂದಲೇ ಸುವ್ಯಕ್ತ ದೃಷ್ಟಾಂತಗಳನ್ನು ಪಡೆದ ಬಳಿಕ ಸತ್ಯವನ್ನು ತ್ಯಜಿಸಿ ವಿವಿಧ ಹಾದಿಗಳನ್ನು ಸೃಷ್ಟಿಸಿಕೊಂಡರು.[1] ಜನರು ಭಿನ್ನಾಭಿಪ್ರಾಯ ತಾಳಿದ್ದ ಆ ಸತ್ಯಮಾರ್ಗವನ್ನು ಅಲ್ಲಾಹನು ತನ್ನ ಅನುಮತಿಯಿಂದ, ಪ್ರವಾದಿಗಳ ಮೇಲೆ ವಿಶ್ವಾಸವಿಟ್ಟವರಿಗೆ ತೋರಿಸಿಕೊಟ್ಟನು. ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ.'' (ಪವಿತ್ರ ಕುರ್‌ಆನ್,2:213)

''ಓ ಪೈಗಂಬರರೇ, ಹೇಳಿರಿ 'ಓ ಗ್ರಂಥದವರೇ, ನಿಮ್ಮ ಮತ್ತು ನಮ್ಮೊಳಗೆ ಸಮಾನವಾಗಿರುವ ವಿಷಯಗಳ ಕಡೆಗೆ ಬನ್ನಿರಿ.[2] ಅದೆಂದರೆ ನಾವು ಅಲ್ಲಾಹನ ಹೊರತು ಇತರ ಯಾರ ದಾಸ್ಯ-ಆರಾಧನೆಯನ್ನೂ ಮಾಡದಿರೋಣ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರೋಣ ಮತ್ತು ನಮ್ಮ ಪೈಕಿ ಯಾರೂ ಅಲ್ಲಾಹನ ಹೊರತು ಇತರ ಯಾರನ್ನೂ ತನ್ನ ಪ್ರಭುವಾಗಿರಿಸದಿರೋಣ.' ಈ ಕರೆಯನ್ನು ಸ್ವೀಕರಿಸಲು ಅವರು ಹಿಂಜರಿದರೆ, ನಾವಂತು ಮುಸ್ಲಿಮರು (ಕೇವಲ ಅಲ್ಲಾಹನ ದಾಸ್ಯ-ಆರಾಧನೆ ಮತ್ತು ದಾಸ್ಯ-ಅನುಸರಣೆ ಮಾಡುವವರು) ಎಂದು ಸ್ಪಷ್ಟವಾಗಿ ಹೇಳಿಬಿಡಿರಿ.'' (ಪವಿತ್ರ ಕುರ್‌ಆನ್,3:64)

''ಓ ಪೈಗಂಬರರೇ, ಹೇಳಿರಿ 'ನಾವು ಅಲ್ಲಾಹನ ಮೇಲೆ ವಿಶ್ವಾಸವಿಟ್ಟಿದ್ದೇವೆ. ನಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟಿರುವ ಶಿಕ್ಷಣದ ಮೇಲೂ ವಿಶ್ವಾಸವಿಟ್ಟಿದ್ದೇವೆ. ಇಬ್‌ರಾಹೀಮ್, ಇಸ್ಮಾಈಲ್, ಇಸ್‌ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿಗಳ ಮೇಲೆ

ಅವತೀರ್ಣಗೊಳಿಸಲ್ಪಟ್ಟ ಶಿಕ್ಷಣದ ಮೇಲೂ ವಿಶ್ವಾಸವಿಟ್ಟಿದ್ದೇವೆ. ಮೂಸಾ, ಈಸಾ ಮತ್ತು ಇತರ ಪ್ರವಾದಿಗಳಿಗೆ ಅವರ ಪ್ರಭುವಿನ ಕಡೆಯಿಂದ ನೀಡಲ್ಪಟ್ಟವುಗಳ ಮೇಲೂ ವಿಶ್ವಾಸವಿಟ್ಟಿದ್ದೇವೆ. ನಾವು ಅವರೊಳಗೆ ಭೇದವೆಣಿಸುವುದಿಲ್ಲ ಮತ್ತು ನಾವು ಅಲ್ಲಾಹನ ಆಜ್ಞಾಪಾಲಕ(ಮುಸ್ಲಿಮ್) ರಾಗಿರುತ್ತೇವೆ. (ಪವಿತ್ರ ಕುರ್‌ಆನ್,3:84)

## ಟಿಪ್ಪಣಿ:

1. ವಾಸ್ತವಿಕತೆಯ ಅರಿವಿಲ್ಲದವರು ಕೇವಲ ಊಹಾ ಪೋಹಗಳ ಆಧಾರದಲ್ಲಿ ಧರ್ಮದ ಇತಿಹಾಸವನ್ನು ತಯಾರಿಸಿ, ಮಾನವನು ತನ್ನ ಜೀವನವನ್ನು ಬಹುದೇವಾರಾಧನೆಯಿಂದ ಆರಂಭಿಸಿದನೆಂದೂ ಇನ್ನು ಕೆಲವು ಗ್ರಂಥಗಳು ಆದಮ್(ಅ) Adam ರವರು ತಪ್ಪೆಸಗಿದ್ದರಿಂದ ಮಾನವರೆಲ್ಲರೂ ತಪ್ಪಿತಸ್ಥರೆಂದೂ ಹೇಳುತ್ತವೆ. ಆದರೆ ಕುರ್‌ಆನ್ ಇದಕ್ಕೆ ತೀರಾ ವ್ಯತಿರಿಕ್ತವಾಗಿ, ಮಾನವ ಜೀವನದ ಆರಂಭವು ಪರಿಪೂರ್ಣ ಬೆಳಕಿನಲ್ಲೇ ಆಯಿತೆಂದು ಸಾರುತ್ತದೆ. ಅದರ ಪ್ರಕಾರ ಅಲ್ಲಾಹನು ತಾನು ಸೃಷ್ಟಿಸಿದ ಪ್ರಥಮ ಮಾನವನಿಗೆ ಪರಮಾರ್ಥವನ್ನೂ ಅವನು ಈ ಲೋಕದಲ್ಲಿ ಅನುಸರಿಸಬೇಕಾದ ನೇರ ಮಾರ್ಗವನ್ನೂ ಆರಂಭದಲ್ಲೇ ತೋರಿಸಿಕೊಟ್ಟನು. ಆದಮರ ಸಂತತಿಯು ಬಹುಕಾಲ ಸನ್ಮಾರ್ಗದಲ್ಲೇ ನಡೆಯುತ್ತಾ ಒಂದೇ ಉಮ್ಮತ್ (ಸಮುದಾಯ) ಆಗಿ ಮುಂದುವರಿಯಿತು. ಕಾಲಕ್ರಮೇಣ ಕೆಲವರು ಹೊಸ ಹೊಸ ಮಾರ್ಗಗಳನ್ನು ಸೃಷ್ಟಿಸಿಕೊಂಡರು. ವಿವಿಧ ಸಂಪ್ರದಾಯಗಳನ್ನು ಆವಿಷ್ಕರಿಸಿಕೊಂಡರು. ಅವರು ಹೀಗೆ ಮಾಡಿದುದು ಅವರಿಗೆ ಪರಮಾರ್ಥವನ್ನು ತೋರಿಸಿಕೊಡದೇ ಇದ್ದ ಕಾರಣದಿಂದಲ್ಲ, ಅವರು ಅದನ್ನು ಅರಿತಿದ್ದರೂ ತಮಗೆ ನ್ಯಾಯವಾಗಿ ಸಿಗುತ್ತಿರುವುದಕ್ಕಿಂತ ಅಧಿಕ ಸ್ಥಾನ-ಮಾನ, ಲಾಭಾದಿಗಳನ್ನು ಗಿಟ್ಟಿಸಿಕೊಳ್ಳಲು ಬಯಸಿದ್ದರು ಮತ್ತು ಪರಸ್ಪರ ಅನ್ಯಾಯ ಅತ್ಯಾಚಾರ ಹಾಗೂ ಅತಿರೇಕಗಳನ್ನು ಮಾಡಲುದ್ಯುಕ್ತರಾದರು. ಈ ದೋಷವನ್ನು ನಿವಾರಿಸಲು ಅಲ್ಲಾಹನು ಪ್ರವಾದಿಗಳನ್ನು ಕಳುಹಿಸಲಾರಂಭಿಸಿದನು. ಪ್ರತಿಯೊಬ್ಬ ಪ್ರವಾದಿಯೂ ತನ್ನ ಹೆಸರಿನ ಒಂದು ಹೊಸ ಧರ್ಮ ಸ್ಥಾಪನೆ ಮಾಡಿ, ಒಂದು ಹೊಸ ಸಮುದಾಯ ಉಂಟು ಮಾಡಬೇಕೆಂಬ ಉದ್ದೇಶದಿಂದ ಅವರನ್ನು ಕಳುಹಿಸಲಾಗುತ್ತಿದ್ದುದಲ್ಲ, ಜನರು ಕಳೆದುಕೊಂಡಿದ್ದ ಸತ್ಯಮಾರ್ಗವನ್ನು ಅವರಿಗೆ ವ್ಯಕ್ತಪಡಿಸಿ, ಅವರನ್ನು ಪುನಃ ಒಂದೇ ಸಮುದಾಯವನ್ನಾಗಿ ಪರಿವರ್ತಿಸಬೇಕೆಂಬುದೇ ಅದರ ಉದ್ದೇಶವಾಗಿತ್ತು.

2. ಅರ್ಥಾತ್, ನಾವು ವಿಶ್ವಾಸವಿಟ್ಟಿರುವ ಮತ್ತು ನಿಮ್ಮಿಂದಲೂ ನಿರಾಕರಿಸಲಿಕ್ಕಾಗದ ವಿಶ್ವಾಸವೊಂದರ ಬಗ್ಗೆ ನಾವು ಒಂದಾಗೋಣ. ನಿಮ್ಮ ಪ್ರವಾದಿಗಳಿಂದಲೂ ಇದೇ ವಿಶ್ವಾಸ ಉಲ್ಲೇಖಿಸಲ್ಪಟ್ಟಿದೆ. ನಿಮ್ಮ ದಿವ್ಯ ಗ್ರಂಥಗಳಲ್ಲಿಯೂ ಇದರ ಬೋಧನೆಯೇ ಇದೆ.



# 8. ಅಕ್ರಮ ಸಲ್ಲದು

''ಜನರಿಗೆ ಅವರ ವಸ್ತುಗಳನ್ನು ಕಡಿತಗೊಳಿಸಿ ಕೊಡಬೇಡಿರಿ ಮತ್ತು ಭೂಮಿಯಲ್ಲಿ ಗೊಂದಲವನ್ನು ಹರಡುತ್ತಿರಬೇಡಿರಿ.'' (ಪವಿತ್ರ ಕುರ್‌ಆನ್,26:183)

''ಬನೀಇಸ್ರಾಈಲರಲ್ಲಿ 'ಧರ್ಮಧಿಕ್ಕಾರ' ಮಾರ್ಗವನ್ನನುಸರಿಸಿದವರು ದಾವೂದ್ ಮತ್ತು ಮರ್ಯಮರ ಪುತ್ರ 'ಈಸಾ'ರ ಬಾಯಿಯಿಂದ ಶಪಿಸಲ್ಪಟ್ಟರು. ಏಕೆಂದರೆ, ಅವರು ಸೊಕ್ಕಿದ್ದರು ಮತ್ತು ಅತಿಕ್ರಮವೆಸಗುತ್ತಿದ್ದರು.'' (ಪವಿತ್ರ ಕುರ್‌ಆನ್,5:78)

''ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ.'' (ಪವಿತ್ರ ಕುರ್‌ಆನ್,83:1-3)

□□□

# 9. ಅಪಹಾಸ್ಯ ಮಾಡದಿರಿ

''ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನೂ ಅಪಹಾಸ್ಯಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು.[1] ಪರಸ್ಪರರನ್ನು ನಿಂದಿಸಬೇಡಿರಿ[2] ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು.[3] ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು.'' (ಪವಿತ್ರ ಕುರ್‌ಆನ್,49:11)

## ಟಿಪ್ಪಣಿ:

1. ಅಪಹಾಸ್ಯವೆಂದರೆ ಮಾತಿನಿಂದ ಆಡುವ ಅಪಹಾಸ್ಯ ಮಾತ್ರವಲ್ಲ, ಅನುಕರಣೆ ಮಾಡಿ ತೋರಿಸುವುದು, ಯಾರ ಕಡೆಗಾದರೂ ಬೆರಳು ತೋರಿಸಿ ಏನಾದರೂ ವ್ಯಂಗ್ಯ ಸೂಚಿಸುವುದು ಅವರ ಮಾತು, ಕೆಲಸ, ರೂಪ ಅಥವಾ ಉಡುಪುಗಳನ್ನು ಕಂಡು ನಗುವುದು ಅಥವಾ ಇತರರು ನಗುವಂತೆ ಅವರ ಯಾವುದಾದರೂ ಕೊರತೆ ಅಥವಾ ದೋಷಗಳ ಕಡೆಗೆ ಜನರ ಗಮನ ಸೆಳೆಯುವುದು, ತಮಾಷೆ ಮಾಡುವುದು. ಇವೆಲ್ಲ ಅಪಹಾಸ್ಯ ಮಾಡುವುದರಲ್ಲಿ ಸೇರುತ್ತದೆ ನಿಜವಾಗಿ ಒಬ್ಬನು ಇನ್ನೊಬ್ಬನನ್ನು ಯಾವ ರೀತಿಯಲ್ಲೂ ಹಂಗಿಸಬಾರದು ಅಥವಾ ಲೇವಡಿ ಮಾಡಬಾರದು ಎಂಬುದೇ ಈ ಆದೇಶದ ಇಂಗಿತವಾಗಿದೆ. ಇಸ್ಲಾಮ್ ಮಿಶ್ರ ಕೂಟಗಳಿಗೆ ಮಾನ್ಯತೆಯನ್ನೇ ಕೊಡುವುದಿಲ್ಲವಾದ್ದರಿಂದ ಇಲ್ಲಿ ಸ್ತ್ರೀಯರು ಮತ್ತು ಪುರುಷರ ಬಗ್ಗೆ ಪ್ರತ್ಯೇಕವಾಗಿ ಪ್ರಸ್ತಾಪಿಸಲಾಗಿದೆ. ಸಾಮಾನ್ಯವಾಗಿ ಪರಸ್ಪರ ಲೇವಡಿ ಮಾಡುವ ಕಾರ್ಯವು ಅನೌಪಚಾರಿಕ ಕೂಟಗಳಲ್ಲಿ ನಡೆಯುತ್ತದೆ. ನಿಕಟ ಸಂಬಂಧಿಗಳಲ್ಲದ ಸ್ತ್ರೀ-ಪುರುಷರು ಒಂದೆ ಕೂಟದಲ್ಲಿ ಸೇರಿಕೊಂಡು ಪರಸ್ಪರ ಹಾಸ್ಯ, ಅಣಕಗಳ ಮಾತನ್ನಾಡುವ ಅವಕಾಶವನ್ನೇ ಇಸ್ಲಾಮ ಕೊಟ್ಟಿರುವುದಿಲ್ಲ.

2. ಇಲ್ಲಿ ನಿಂದನೆಯನ್ನು ಅನೇಕ ಅರ್ಥಗಳಿಂದ ವ್ಯಾಖ್ಯಾನಿಸಬಹುದು. ಉದಾ ಮನನೋಯಿಸುವ ಮಾತು, ವ್ಯಂಗ್ಯ, ದೋಷಾರೋಪಣೆ, ವೃಥಾ ಆಕ್ಷೇಪ, ದೋಷ ಹುಡುಕಿ ಹೇಳುವುದು, ವ್ಯಕ್ತವಾಗಿ, ಗುಪ್ತವಾಗಿ ಅಥವಾ ಸೂಚ್ಯವಾಗಿ ಇತರರನ್ನು ನಿಂದಿಸುವುದು. ಇವೆಲ್ಲ ಪರಸ್ಪರ ಸಂಬಂಧಗಳನ್ನು ಹಾಳು ಮಾಡಲು ಹಾಗೂ ಸಮಾಜದಲ್ಲಿ ಅಶಾಂತಿಯನ್ನುಂಟು ಮಾಡಲು ಕಾರಣವಾಗುವುದರಿಂದ ಇವುಗಳನ್ನು ನಿಷಿದ್ಧಗೊಳಿಸಲಾಗಿದೆ.

3. ಈ ಆಜ್ಞೆಯ ಇಂಗಿತವೇನೆಂದರೆ ಯಾವುದೇ ವ್ಯಕ್ತಿಯನ್ನು ಆತನಿಗೆ ಅಪ್ರಿಯವಾಗುವಂತಹ ಮತ್ತು ಅವನಿಗೆ ನಿಂದೆ ಅಥವಾ ಅಪಮಾನವಾಗುವಂತಹ ಹೆಸರಿನಿಂದ ಕರೆಯಬಾರದು ಅಥವಾ ಯಾರಿಗೂ ಅಂತಹ ಬಿರುದು ನೀಡಬಾರದು. ಉದಾ: ಯಾರನ್ನಾದರೂ ಕರ್ಮಭ್ರಷ್ಟ ಅಥವಾ 'ಮುನಾಫಿಕ್'(ಕಪಟ ವಿಶ್ವಾಸಿ) ಎಂದು ಕರೆಯುವುದು, ಕುಂಟ, ಕುರುಡ, ಒಕ್ಕಣ್ಣನೆನ್ನುವುದು, ಯಾರನ್ನಾದರೂ ಅವನ ಸ್ವಂತದ ತಂದೆ-ತಾಯಿಗಳ ಅಥವಾ ಮನೆತನದ ಯಾವುದಾದರೂ ದೋಷದ ಹೆಸರಿನಿಂದ ಕರೆಯುವುದು.



# 10. ಸುಳ್ಳಾರೋಪ ಮಾಡಬಾರದು

''ಸುಶೀಲೆಯರಾದ, ಮುಗ್ಧೆಯರಾದ ಸತ್ಯವಿಶ್ವಾಸಿನಿಯರ ಮೇಲೆ ಸುಳ್ಳಾರೋಪ ಹೊರಿಸುವವರನ್ನು ಈ ಲೋಕದಲ್ಲೂ ಪರಲೋಕದಲ್ಲೂ ಶಪಿಸಲಾಗಿದೆ ಮತ್ತು ಅವರಿಗಾಗಿ ಮಹಾಯಾತನೆ ಇದೆ.'' (ಪವಿತ್ರ ಕುರ್‌ಆನ್,24:23)

## ಟಿಪ್ಪಣಿ:

ಅರ್ಥಾತ್, ಮೋಸ ವಂಚನೆಗಳನ್ನರಿಯದ ತಿಳಿ ಮನಸ್ಸಿನ ಮುಗ್ಧ ಮಹಿಳೆಯರು, ದುರಾಚಾರವೇನೆಂದು ಅರಿಯದವರು ಮತ್ತು ಸಾಧ್ವಿಯಾದ ಸ್ತ್ರೀಯ ಮೇಲೆ ಸುಳ್ಳಾರೋಪ ಹೊರಿಸುವುದು 'ಮೂಬಿಕಾತ್'(ವಿನಾಶಕಾರಿ) ಎನಿಸಿರುವಂತಹ ಏಳು ಮಹಾಪಾತಕಗಳಲ್ಲೊಂದು ಎಂದು ಪ್ರವಾದಿವರ್ಯರು(ಸ) ಹೇಳಿರುತ್ತಾರೆ.

□□□

# 11. ಕ್ಷೋಭೆಯನ್ನು ಹರಡಬಾರದು

''ಅಲ್ಲಾಹನು ನಿನಗೆ ನೀಡಿರುವ ಸಂಪತ್ತಿನಿಂದ ನೀನು ಪರಲೋಕಗೃಹ ನಿರ್ಮಾಣ ಮಾಡುವ ಕುರಿತು ಚಿಂತಿಸು ಮತ್ತು ಇಹಲೋಕದಿಂದಲೂ ನಿನ್ನ ಪಾಲನ್ನು ಮರೆಯಬೇಡ. ಅಲ್ಲಾಹನು ನಿನಗೆ ಉಪಕಾರ ಮಾಡಿದಂತೆಯೇ ನೀನೂ ಪರೋಪಕಾರ ಮಾಡು ಮತ್ತು ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡಲು ಪ್ರಯತ್ನಿಸಬೇಡ. ಅಲ್ಲಾಹನು ಕ್ಷೋಭೆಯನ್ನುಂಟು ಮಾಡುವವರನ್ನು ಮೆಚ್ಚುವುದಿಲ್ಲ.'' (ಪವಿತ್ರ ಕುರ್‌ಆನ್,28:77)

''ನೀವು ವಿಮುಖರಾಗಿಬಿಟ್ಟರೆ ಭೂಮಿಯಲ್ಲಿ ಪುನಃ ಕ್ಷೋಭೆಯನ್ನುಂಟು ಮಾಡುವ ಹಾಗೂ ಪರಸ್ಪರ ಕತ್ತು ಕೊಯ್ಯುವ ಹೊರತು ನಿಮ್ಮಿಂದ ಬೇರೇನನ್ನಾದರೂ ನಿರೀಕ್ಷಿಸಬಹುದೇ?[1]'' (ಪವಿತ್ರ ಕುರ್‌ಆನ್,47:22)

''ಮದ್‌ಯನರ[2] ಕಡೆಗೆ ಅವರ ಸಹೋದರ 'ಶುಐಬ್'ರನ್ನು ಕಳುಹಿಸಿದೆವು. ಅವರು ಹೇಳಿದರು, 'ಓ ನನ್ನ ಜನಾಂಗ ಬಾಂಧವರೇ, ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನ ಹೊರತು ನಿಮ್ಮ ಆರಾಧ್ಯನಾರೂ ಇಲ್ಲ. ನಿಮ್ಮ ಬಳಿಗೆ ನಿಮ್ಮ ಪ್ರಭುವಿನ ಸುವ್ಯಕ್ತ ಮಾರ್ಗದರ್ಶನ ಬಂದಿರುತ್ತದೆ. ಆದುದರಿಂದ ಅಳತೆ ಮತ್ತು ತೂಕವನ್ನು ಸಂಪೂರ್ಣಗೊಳಿಸಿರಿ. ಜನರಿಗೆ ಅವರ ವಸ್ತುಗಳನ್ನು ಕಡಿತಗೊಳಿಸಿ ಕೊಡಬೇಡಿರಿ ಮತ್ತು ಭೂಮಿಯಲ್ಲಿ ಸುಧಾರಣೆಯಾದ ಬಳಿಕ ಕ್ಷೋಭೆಯನ್ನುಂಟು ಮಾಡಬೇಡಿರಿ.[4] ನೀವು ನಿಜಕ್ಕೂ ವಿಶ್ವಾಸಿಗಳಾಗಿದ್ದರೆ ಇದರಲ್ಲಿ ನಿಮಗೆ ಒಳಿತಿದೆ.'' (ಪವಿತ್ರ ಕುರ್‌ಆನ್,7:85)

''ಆ ಅತಿರೇಕಿಗಳನ್ನು ಅನುಸರಿಸಬೇಡಿರಿ.[5] ಅವರು ಭೂಮಿಯಲ್ಲಿ ಗೊಂದಲವನ್ನುಂಟು ಮಾಡುತ್ತಾರೆ. ಯಾವ ಸುಧಾರಣಾ ಕಾರ್ಯವನ್ನೂ ಮಾಡುವುದಿಲ್ಲ.''

(ಪವಿತ್ರ ಕುರ್‌ಆನ್,26:151-152)

## ಟಿಪ್ಪಣಿ:

1. ಅರ್ಥಾತ್, ಈಗ ನೀವು ಇಸ್ಲಾಮಿನ ರಕ್ಷಣೆಯ ಕಾರ್ಯದಲ್ಲಿ ನಿರ್ಲಕ್ಷ್ಯ ವಹಿಸಿದರೆ ಮತ್ತು ಪ್ರವಾದಿವರ್ಯರು(ಸ) ಹಾಗೂ ಸತ್ಯವಿಶ್ವಾಸಿಗಳು ಪ್ರಯತ್ನಿಸುತ್ತಿರುವಂತಹ ಆ ಬೃಹತ್ ಸುಧಾರಣಾ ಕ್ರಾಂತಿಗಾಗಿ ತನುಧನಗಳಿಂದ ಪರಿಶ್ರಮಿಸದಿದ್ದರೆ ಇದರ ಪರಿಣಾಮವಾಗಿ ನೀವು ಶತಮಾನಗಳಿಂದೀಚೆಗೆ ಪರಸ್ಪರ ಕೊರಳು ಕೊಯ್ಯುತ್ತಿದ್ದ, ಹೆಚ್ಚೇಕೆ ನಿಮ್ಮ ಮಕ್ಕಳನ್ನೂ ಜೀವಂತ ಹೂಳುತ್ತಿದ್ದ ಮತ್ತು ಭೂಮಿಯನ್ನು ಅಕ್ರಮ ಅತ್ಯಾಚಾರಗಳಿಂದ ತುಂಬುತ್ತಿದ್ದ ಅದೇ ಅಜ್ಞಾನಜನ್ಯ ಜೀವನ ವ್ಯವಸ್ಥೆಗೆ ಮರಳಬೇಕಾದೀತು. ಇದರ ಇನ್ನೊಂದು ಅರ್ಥವೇನೆಂದರೆ

ನೀವು ಯಾವ ಧರ್ಮದ ಮೇಲೆ ವಿಶ್ವಾಸವಿರಿಸುವ ಕರಾರು ಮಾಡಿರುತ್ತೀರೋ ಅದರ ಬಗ್ಗೆ ನಿಮ್ಮಲ್ಲಿ ನಿಷ್ಠೆಯಾಗಲೀ ಪ್ರಾಮಾಣಿಕತೆಯಾಗಲೀ ಇಲ್ಲ, ಅದಕ್ಕಾಗಿ ತ್ಯಾಗ ಮಾಡಲು ನೀವು ಸಿದ್ಧರಿಲ್ಲ, ನಿಮ್ಮ ನೈತಿಕ ಸ್ಥಿತಿ ಹೀಗಿದೆ. ಈ ಸ್ಥಿತಿಯಲ್ಲಿ ಅಲ್ಲಾಹನು ನಿಮಗೆ ಅಧಿಕಾರ ಕೊಟ್ಟುಬಿಟ್ಟರೆ ಹಾಗೂ ಲೌಕಿಕ ವ್ಯವಹಾರಗಳ ಸೂತ್ರವು ನಿಮ್ಮ ಕೈಗಳಲ್ಲಿ ಬಂದು ಬಿಟ್ಟರೆ, ನಿಮ್ಮಿಂದ ಅಕ್ರಮ ಅತ್ಯಾಚಾರಗಳನ್ನೂ ಸಹೋದರ ಹತ್ಯೆಯನ್ನೂ ಮಾಡುವುದರ ಹೊರತು ಬೇರೇನನ್ನು ತಾನೆ ನಿರೀಕ್ಷಿಸಲು ಸಾಧ್ಯ? ಈ ಸೂಕ್ತವು ಆಪ್ತ ಸಂಬಂಧಗಳನ್ನು ಮುರಿಯುವುದು ನಿಷಿದ್ಧವೆಂಬುದಕ್ಕೆ ಆಧಾರವಾಗಿದೆ.

2. ಮದ್‌ಯನ್‌ರ ಮುಖ್ಯ ಪ್ರದೇಶವು ಫೆಲೆಸ್ತೀನಿನ ದಕ್ಷಿಣಕ್ಕೆ ಕೆಂಪು ಸಮುದ್ರ ಮತ್ತು ಅಕಬಾ ಕೊಲ್ಲಿಗಳ ದಡಗಳಲ್ಲಿತ್ತು. ಇದು ಬಹುದೊಡ್ಡ ವ್ಯಾಪಾರೀ ಜನಾಂಗವಾಗಿತ್ತು. ಪ್ರಾಚೀನ ಕಾಲದಲ್ಲಿ ಕೆಂಪು ಸಮುದ್ರದ ಕರಾವಳಿಯಲ್ಲೇ ಯಮನಿನಿಂದ ಮಕ್ಕಾ, ಯಾಂಬೂಗಳನ್ನು ಹಾದು ಸಿರಿಯಾಕ್ಕೆ ಹೋಗುತ್ತಿದ್ದ ರಾಜಮಾರ್ಗ ಮತ್ತು ಇರಾಕಿನಿಂದ ಈಜಿಪ್ಟಿಗೆ ಸಾಗುತ್ತಿದ್ದ ಇನ್ನೊಂದು ವಾಣಿಜ್ಯ ಮಾರ್ಗ ಇವೆರಡೂ ಕೂಡುವಲ್ಲೇ ಈ ಜನಾಂಗವು ವಾಸಿಸುತ್ತಿದ್ದವು ಆದುದರಿಂದ ಅರಬ್ ದೇಶದ ಪ್ರತಿಯೋರ್ವನು ಮದ್‌ಯನನ್ನು ಅರಿತಿದ್ದನು.

3. ಈ ಜನಾಂಗದಲ್ಲಿ ಎರಡು ದೊಡ್ಡ ದೋಷಗಳು ಕಂಡು ಬರುತ್ತಿದ್ದವು. ಒಂದನೆಯದ ಶಿರ್ಕ್(ದೇವಸಹಭಾಗಿತ್ವ) ಎರಡನೆಯದು ಮಾರಾಟ ಮತ್ತು ಖರೀದಿಯಲ್ಲಿ ಅಪ್ರಾಮಾಣಿಕತೆ ಈ ಎರಡು ವಿಷಯಗಳನ್ನು ತಿದ್ದಲಿಕ್ಕಾಗಿ ಹ. ಶುಐಬ್‌ರನ್ನು(ಅ) ಕಳುಹಿಸಲಾಯ್ತು.

4. ಇಲ್ಲಿ ಮುಖ್ಯವಾಗಿ ಹ. ಶುಐಬ್‌ರ(ಅ) ಹೇಳಿಕೆಯಿಂದ ಸಿಗುವ ಸೂಚನೆಯೆಂದರೆ ಗತ ಪ್ರವಾದಿಗಳ ಮಾರ್ಗದರ್ಶನದಲ್ಲಿ ಸತ್ಯ, ಸತ್ಯಧರ್ಮ ಮತ್ತು ಸಚ್ಚಾರಿತ್ರ್ಯಗಳ ಆಧಾರದ ಸ್ಥಾಪನೆಗೊಂಡಿದ್ದಂತಹ ವ್ಯವಸ್ಥೆಯನ್ನು ನೀವೀಗ ನಿಮ್ಮ ವಿಶ್ವಾಸದಲ್ಲಿನ ಪಥಭ್ರಷ್ಟತೆ ಮತ್ತು ಅನೈತಿಕತೆಗಳ ಮೂಲಕ ಕೆಡಿಸಬೇಡಿರಿ ಎಂದಾಗಿದೆ.

5. ಅರ್ಥಾತ್, ನಿಮ್ಮ ಧನಿಕರ, ಮುಖಂಡರ, ಧುರೀಣರ ಮತ್ತು ಅಧಿಕಾರಿಗಳ ಅನುಸರಣೆಯನ್ನು ಬಿಟ್ಟು ಬಿಡಿರಿ. ಇವರು ದುಂದುಗಾರರು. ನೈತಿಕ ಮೇರೆಗಳೆಲ್ಲವನ್ನು ಮೀರಿ ಲಗಾಮಿಲ್ಲದ ಕುದುರೆಗಳಂತಾಗಿ ಬಿಟ್ಟಿದ್ದಾರೆ. ಅವರ ಕೈಯಲ್ಲಿ ಯಾವ ಸುಧಾರಣೆಯು ಆಗಲಾರದು. ನಿಮ್ಮ ಯಶಸ್ಸಿಗಿರುವ ಒಂದೇ ಒಂದು ದಾರಿ ಯಾವುದೆಂದರೆ ನೀವು ನಿಮ್ಮ ದೇವಭಯವನ್ನು ಬೆಳೆಸಿಕೊಳ್ಳಿರಿ. ದುಷ್ಟರ ಅನುಸರಣೆ ಬಿಟ್ಟು ಬಿಡಿರಿ. ನನ್ನನ್ನು ಅನುಸರಿಸಿ ಏಕೆಂದರೆ ನಾನು ದೇವ ಸಂದೇಶವಾಹಕನಾಗಿರುತ್ತೇನೆ. ಹ. ಸ್ವಾಲಿಹ್‌ರವರು(ಅ) ತಮ್ಮ ಜನಾಂಗದ ಮುಂದೆ ಮಾಡಿದ ಸಂಕ್ಷಿಪ್ತ ಘೋಷಣೆ ಇದೇ ಆಗಿತ್ತು. ಇದರಲ್ಲಿ ಕೇವಲ ಧರ್ಮ ಪ್ರಚಾರ ಮಾತ್ರವಿದ್ದುದಲ್ಲ, ನಾಗರಿಕ, ನೈತಿಕ ಸುಧಾರಣೆ ಮತ್ತು ರಾಜಕೀಯ ಕ್ರಾಂತಿಯ ಕರೆಯೂ ಒಟ್ಟಿಗೇ ಇತ್ತು.

❑❑❑

# 12. ಕೊಲೆ ಮಹಾ ಅಪರಾಧ

''ಅಲ್ಲಾಹನ ಆದೇಶಗಳ ಅನುಸರಣೆಯನ್ನು ನಿರಾಕರಿಸುವವರಿಗೂ ಅವನ ಸಂದೇಶವಾಹಕರನ್ನು ಅನ್ಯಾಯವಾಗಿ ವಧಿಸುವವರಿಗೂ ಮಾನವರ ವರ್ಗದಲ್ಲಿ ನ್ಯಾಯ ನೀತಿಗಳನ್ನು ನಿರ್ದೇಶಿಸಲುದ್ಯುಕ್ತರಾದವರ ಪ್ರಾಣಾಪಹಾರಗೈಯುವವರಿಗೂ ವೇದನಾತ್ಮಕ ಶಿಕ್ಷೆಯ ಶುಭವಾರ್ತೆ ನೀಡಿರಿ.[1]''

(ಪವಿತ್ರ ಕುರ್‌ಆನ್,3:21)

''ನೀವು ಪರಸ್ಪರ ರಕ್ತಪಾತ ಮಾಡಬಾರದೆಂದೂ ಪರಸ್ಪರರನ್ನು ಗೃಹಬಾಹಿರರನ್ನಾಗಿ ಮಾಡಬಾರದೆಂದೂ ನಾವು ನಿಮ್ಮೊಡನೆ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ್ನೂ ಸ್ಮರಿಸಿರಿ. ನೀವು ಅದನ್ನು ಒಪ್ಪಿಕೊಂಡಿದ್ದಿರಿ. ಅದಕ್ಕೆ ನೀವೇ ಸಾಕ್ಷಿಗಳಾಗಿರುತ್ತೀರಿ. ಆದರೆ, ಈಗ ನೀವೇ ನಿಮ್ಮ ಬಂಧು ಬಳಗದವರ ಕೊಲೆಗೈಯುತ್ತೀರಲ್ಲದೆ ನಿಮ್ಮೊಳಗಿನವರನ್ನೇ ಗೃಹಬಾಹಿರರನ್ನಾಗಿ ಮಾಡುತ್ತೀರಿ. ಅವರ ವಿರುದ್ಧ ಅಕ್ರಮ ಗುಂಪುಗಾರಿಕೆ ಮಾಡಿಕೊಳ್ಳುತ್ತೀರಿ. ಅವರು ಯುದ್ಧ ಸೆರೆಯಾಳುಗಳಾಗಿ ಬಂದಾಗ ಅವರ ವಿಮೋಚನೆಗಾಗಿ 'ವಿಮೋಚನಾ ಮೌಲ್ಯ' ಪಡೆದೇ ಅವರನ್ನು ಬಿಡುತ್ತೀರಿ. ವಸ್ತುತಃ ಅವರನ್ನು ಗೃಹಬಾಹಿರರನ್ನಾಗಿ ಮಾಡುವುದನ್ನೇ ನಿಮಗೆ ನಿಷೇಧಿಸಲಾಗಿತ್ತು. ನೀವೇನು ಗ್ರಂಥದ ಒಂದಂಶದ ಮೇಲೆ ವಿಶ್ವಾಸವಿಟ್ಟು ಇನ್ನೊಂದಂಶವನ್ನು ನಿಷೇಧಿಸುತ್ತೀರಾ? ನಿಮ್ಮ ಪೈಕಿ ಹೀಗೆ ಮಾಡುವವರ ಶಿಕ್ಷೆಯು ಇಹದಲ್ಲಿ ಅವಮಾನಿತ ಜೀವನವೂ ಪರದಲ್ಲಿ ಘೋರ ಯಾತನೆಯ ಕಡೆಗೆ ತಳ್ಳಲ್ಪಡುವುದೂ ಆಗಿರಬೇಕಲ್ಲದೆ ಇನ್ನೇನು? ನೀವು ಮಾಡುವುದರ ಬಗ್ಗೆ ಅಲ್ಲಾಹನು ಅಶ್ರದ್ಧನಲ್ಲ. ಇವರು ತಮ್ಮ ಪರಲೋಕವನ್ನು ಮಾರಿ ಇಹಲೋಕವನ್ನು ಖರೀದಿಸಿದವರು. ಆದುದರಿಂದ ಇವರ ಶಿಕ್ಷೆಯಲ್ಲಿ ಸ್ವಲ್ಪವೂ ಕಡಿಮೆಯಾಗದು ಮತ್ತು ಅವರಿಗೆ ಯಾವ ಸಹಾಯವೂ ಒದಗದು.''

(ಪವಿತ್ರ ಕುರ್‌ಆನ್,2:84,85,86)

''ಈ ಕಾರಣದಿಂದಲೇ ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರೂ ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ ಮತ್ತು ಒಬ್ಬನು ಇನ್ನೊಬ್ಬನಿಗೆ ಜೀವದಾನ ಮಾಡಿದರೆ ಅವನು ಸಕಲ ಮಾನವ ಕೋಟಿಗೆ ಜೀವದಾನ ಮಾಡಿದಂತೆ...''

(ಪವಿತ್ರ ಕುರ್‌ಆನ್,5:32)

''ಓ ಪೈಗಂಬರರೇ, 'ಆದಮ'ರ ಈರ್ವರು ಪುತ್ರರ ವೃತ್ತಾಂತವನ್ನು ಇವರಿಗೆ ಮುಚ್ಚುಮರೆಯಿಲ್ಲದೆ ಹೇಳಿಬಿಡಿರಿ. ಅವರಿಬ್ಬರೂ ಬಲಿಯರ್ಪಿಸಿದಾಗ ಒಬ್ಬನ ಬಲಿದಾನವು ಸ್ವೀಕೃತವಾಯಿತು ಮತ್ತು ಇನ್ನೊಬ್ಬನದು ಸ್ವೀಕರಿಸಲ್ಪಡಲಿಲ್ಲ. ಅವನು, 'ಖಂಡಿತವಾಗಿಯೂ

ನಾನು ನಿನ್ನನ್ನು ವಧಿಸುವೆನು' ಎಂದನು. ಇವನು, 'ಅಲ್ಲಾಹ್ ಧರ್ಮನಿಷ್ಠರ' ಬಲಿದಾನವನ್ನು ಮಾತ್ರ ಸ್ವೀಕರಿಸುತ್ತಾನೆ'' ಎಂದನು. (ಪವಿತ್ರ ಕುರ್‌ಆನ್,5:27)

''ನೀನು ನನ್ನನ್ನು ವಧಿಸಲು ಕೈಯೆತ್ತಿದರೂ ನಾನು ನಿನ್ನನ್ನು ವಧಿಸೆನು. ನಾನು ಸರ್ವಲೋಕ ಪಾಲಕನಾದ ಅಲ್ಲಾಹನನ್ನು ಭಯಪಡುತ್ತೇನೆ.'' (ಪವಿತ್ರ ಕುರ್‌ಆನ್,5:28)

''ಒಬ್ಬ ಸತ್ಯವಿಶ್ವಾಸಿಯನ್ನು ಉದ್ದೇಶ ಪೂರ್ವಕವಾಗಿ ವಧಿಸಿದವನಿಗೆ ಅದರ ಪ್ರತಿಫಲ ನರಕವೇ ಆಗಿದ್ದು ಅವನು ಅದರಲ್ಲಿ ಸದಾಕಾಲ ವಾಸಿಸುವನು. ಅವನ ಮೇಲೆ ಅಲ್ಲಾಹನ ಕ್ರೋಧ ಮತ್ತು ಶಾಪವಿದೆ. ಅಲ್ಲಾಹನು ಅವನಿಗಾಗಿ ಘೋರ ಶಿಕ್ಷೆಯನ್ನು ಸಿದ್ಧಗೊಳಿಸಿಟ್ಟಿರುತ್ತಾನೆ.''

(ಪವಿತ್ರ ಕುರ್‌ಆನ್,4:93)

''ಓ ಸತ್ಯವಿಶ್ವಾಸಿಗಳೇ, ನೀವು ಪರಸ್ಪರರ ಸಂಪತ್ತನ್ನು ಅನುಚಿತ ರೀತಿಯಿಂದ ಕಬಳಿಸಬೇಡಿರಿ. ಲೇವಾದೇವಿಗಳು ಪರಸ್ಪರ ಒಪ್ಪಿಗೆಯಿಂದಾಗಬೇಕು.[3] ನಿಮ್ಮನ್ನು ನೀವೇ ವಧಿಸಿಕೊಳ್ಳಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಕೃಪೆಯುಳ್ಳವನೆಂಬುದನ್ನು ಖಾತ್ರಿಯಾಗಿ ನಂಬಿರಿ.[4]'' (ಪವಿತ್ರ ಕುರ್‌ಆನ್,4:29)

''ಈ ಸಂದರ್ಭದಲ್ಲಿ ತನ್ನ ಸತ್ಯವಿಶ್ವಾಸವನ್ನು ಬಚ್ಚಿಟ್ಟುಕೊಂಡಿದ್ದ ಫಿರ್‌ಔನನ ವಂಶದ ಓರ್ವ ಸತ್ಯವಿಶ್ವಾಸಿಯು ಹೀಗೆ ಹೇಳಿದನು, 'ನನ್ನ ಪ್ರಭು ಅಲ್ಲಾಹನಾಗಿರುತ್ತಾನೆಂದು ಹೇಳಿದುದಕ್ಕಾಗಿ ಮಾತ್ರ ನೀವು ಒಬ್ಬನನ್ನು ವಧಿಸಿ ಬಿಡುವಿರಾ? ವಸ್ತುತಃ ಅವರು ನಿಮ್ಮ ಪ್ರಭುವಿನ ಕಡೆಯಿಂದ ನಿಮ್ಮ ಬಳಿಗೆ ಸುವ್ಯಕ್ತ ಪ್ರಮಾಣಗಳನ್ನು ತಂದಿದ್ದಾರೆ. ಅವರು ಸುಳ್ಳುಗಾರರಾಗಿದ್ದರೆ ಅವರ ಸುಳ್ಳು ಸ್ವಯಂ ಅವರ ಮೇಲೆಯೇ ತಿರುಗಿ ಬೀಳುವುದು. ಅವರು ಸತ್ಯವಾದಿಯಾಗಿದ್ದರೆ ಯಾವ ಭಯಾನಕ ದುಷ್ಪರಿಣಾಮಗಳ ಕುರಿತು ಅವರು ನಿಮ್ಮನ್ನು ಎಚ್ಚರಿಸುತ್ತಿರುವರೋ ಅವುಗಳಲ್ಲಿ ಕೆಲವಂತು ನಿಮ್ಮ ಮೇಲೆ ಖಂಡಿತವಾಗಿಯೂ ಬಂದು ಬಿಡುವುವು. ಮಿತಿ ಮೀರುವಾತನಿಗೆ ಮತ್ತು ಸುಳ್ಳುಗಾರನಿಗೆ ಅಲ್ಲಾಹನು ಸನ್ಮಾರ್ಗ ದರ್ಶನ ನೀಡುವುದಿಲ್ಲ.''

(ಪವಿತ್ರ ಕುರ್‌ಆನ್,40:28)

''ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲಬೇಡಿರಿ. ನಾವು ಅವರಿಗೂ ಆಹಾರ ನೀಡುವೆವು, ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ಘೋರ ಅಪರಾಧವಾಗಿದೆ.[5] ಅಲ್ಲಾಹನು ಸನ್ಮಾನಿಸಿರುವ್ ಜೀವವನ್ನು ನ್ಯಾಯದಿಂದಲ್ಲದೆ ಹರಣ ಮಾಡಬೇಡಿರಿ.[7] ಅಕ್ರಮವಾಗಿ ವಧಿಸಲ್ಪಟ್ಟವನ ವಾರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ. ಆದುದರಿಂದ ಅವನು ವಧೆಯಲ್ಲಿ ಹದಮೀರಬಾರದು.[8] ನಿಶ್ಚಯವಾಗಿಯೂ ಅವನಿಗೆ ಸಹಾಯ ಮಾಡಲಾಗುವುದು.'' (ಪವಿತ್ರ ಕುರ್‌ಆನ್,17:31,33)

''ಅವರು ಅಲ್ಲಾಹನ ಹೊರತು ಇತರ ಯಾವ ಆರಾಧ್ಯನನ್ನೂ ಪ್ರಾರ್ಥಿಸುವುದಿಲ್ಲ, ಅಲ್ಲಾಹನು ಗೌರವಿಸಿರುವ ಯಾವ ಜೀವವನ್ನೂ ಅನ್ಯಾಯವಾಗಿ ಸಂಹರಿಸುವುದಿಲ್ಲ, ವ್ಯಭಿಚಾರವೆಸಗುವುದೂ ಇಲ್ಲ. ಈ ಕಾರ್ಯಗಳನ್ನು ಯಾರೇ ಮಾಡಿದರೂ ಅವನು ತನ್ನ ಪಾಪಗಳ ಫಲವನ್ನು ಪಡೆಯುವನು.'' (ಪವಿತ್ರ ಕುರ್‌ಆನ್,25:68)

## ಟಿಪ್ಪಣಿ:

1. ಇದು ಒಂದು ಚುಚ್ಚುಮಾತು. ಇಂದು ತಮ್ಮ ದುಷ್ಕೃತ್ಯಗಳ ಬಗ್ಗೆ ಸಂತೋಷ ಪಟ್ಟು ನಾವು ಬಹಳ ಒಳ್ಳೆಯ ಕೆಲಸ ಮಾಡುತ್ತಿದ್ದೇವೆಂದು ಹಿಗ್ಗುತ್ತಿರುವವರಿಗೆ ನಿಮ್ಮ ಪರಿಣಾಮ ಇದುವೇ ಎಂದು ಹೇಳಿಬಿಡಿರಿ ಎಂದಾಗಿದೆ ಇದರ ಅರ್ಥ.

2. ಈ ಲೋಕದಲ್ಲಿ ಮಾನವ ಅಸ್ತಿತ್ವದ ಉಳಿವು ಪ್ರತಿಯೊಬ್ಬನ ಮನದಲ್ಲಿ ಮಾನವ ಪ್ರಾಣಗಳ ಬಗ್ಗೆ ಗೌರವಭಾವವಿರುವುದನ್ನೂ ಜೀವನದ ಉಳಿವು ಮತ್ತು ರಕ್ಷೆಗಳಿಗೆ ಪರಸ್ಪರ ಸಹಕಾರ ಭಾವನೆ ಇರುವುದನ್ನೂ ಅವಲಂಬಿಸಿದೆ. ಅನ್ಯಾಯವಾಗಿ ಇತರರ ಪ್ರಾಣಹರಣ ಮಾಡುವವನು ಆ ಮೂಲಕ ಕೇವಲ ಒಬ್ಬನ ಮೇಲೆ ಮಾತ್ರ ಅಕ್ರಮವೆಸಗುವುದಲ್ಲ, ತನ್ನಲ್ಲಿ ಮಾನವ ಜೀವಗಳ ಬಗ್ಗೆ ಗೌರವ ಭಾವ, ಸಹಾನುಭೂತಿಗಳಿಲ್ಲವೆಂಬುದನ್ನು ಅವನು ಸಾಬೀತುಪಡಿಸುತ್ತಾನೆ. ಆದುದರಿಂದ ಅವನು ಇಡೀ ಮಾನವ ಕೋಟಿಯ ಶತ್ರು. ಏಕೆಂದರೆ ಅವನಲ್ಲಿ ಇರುವ ದುರ್ಗುಣವು ಎಲ್ಲ ಮನುಷ್ಯರಲ್ಲಿದ್ದು ಬಿಟ್ಟಲ್ಲಿ ಇಡೀ ಮಾನವ ಕೋಟಿಯೇ ನಶಿಸಿ ಹೋಗುವುದು. ಇದಕ್ಕೆ ವ್ಯತಿರಿಕ್ತವಾಗಿ ಯಾರು ಮಾನವ ಜೀವನವನ್ನು ನೆಲೆ ನಿಲ್ಲಿಸಲಿಕ್ಕಾಗಿ ಸಹಾಯ ಮಾಡುವನೋ ಅವನು ಸಕಲ ಮಾನವತೆಯ ಸಹಾಯಕ. ಏಕೆಂದರೆ ಇಡೀ ಮಾನವ ಕೋಟಿಯ ಉಳಿವು ಅವನಲ್ಲಿರುವಂತಹ ಈ ಗುಣ ವಿಶೇಷವನ್ನೇ ಅವಲಂಬಿಸಿಕೊಂಡಿದೆ.

3. ಅನುಚಿತ ರೀತಿಯಲ್ಲಿ ಎಂದರೆ ಸತ್ಯಕ್ಕೆ ದೂರವಾದ ಹಾಗೂ ಧಾರ್ಮಿಕವಾಗಿಯೂ ನೈತಿಕವಾಗಿಯೂ ಅನುಚಿತವಾದವುಗಳು. 'ಲೇವಾದೇವಿ'ಗಳೆಂದರೆ ವ್ಯಾಪಾರ ಮತ್ತು ಉದ್ಯಮಗಳಲ್ಲಿ ಒಬ್ಬನು ಇನ್ನೊಬ್ಬನ ಅವಶ್ಯಕತೆಗಳನ್ನು ಪೂರೈಸಲಿಕ್ಕಾಗಿ ದುಡಿದಾಗ ಅವನು ಆದರ ಪ್ರತಿಫಲ ಕೊಡುತ್ತಾನಷ್ಟೆ. ಅದೇ ರೀತಿ ಪ್ರತಿಫಲ ಮತ್ತು ಲಾಭಗಳೂ ಪರಸ್ಪರ ವಿನಿಮಯವಾಗಬೇಕೆಂದು ಇದರ ಅರ್ಥ. 'ಪರಸ್ಪರ ಒಪ್ಪಿಗೆ'ಯಿಂದ ಎಂದರೆ ಲೇವಾದೇವಿಯು ಅನುಚಿತ ಒತ್ತಡ, ಮೋಸ ಮತ್ತು ವಂಚನೆಗಳಿಂದ ಆಗಬಾರದು. ಲಂಚ ಮತ್ತು ಬಡ್ಡಿ ವ್ಯವಹಾರದಲ್ಲಿ ತೋರಿಕೆಗೆ ಒಪ್ಪಿಗೆ ಇರುವಂತೆ ಕಂಡರೂ ಈ ಒಪ್ಪಿಗೆಯು ವಾಸ್ತವದಲ್ಲಿ ಒತ್ತಾಯ ಪೂರ್ವಕವಾಗಿರುತ್ತದೆ.

4. ಅರ್ಥಾತ್, ಅಲ್ಲಾಹನು ನಿಮ್ಮ ಹಿತಚಿಂತಕನು. ನಿಮ್ಮ ಒಳಿತನ್ನು ಬಯಸುವವನು. ನಿಮ್ಮ ವಿನಾಶಕ್ಕೆ ಕಾರಣವಾಗುವಂತಹ ಕಾರ್ಯಗಳಿಂದ ನಿಮ್ಮನ್ನು ತಡೆಯುವುದು ಅವನ ಮಹಾ ಕೃಪೆಯೇ ಆಗಿರುತ್ತದೆ.

5. ಬಡತನದ ಭಯವು ಹಿಂದಿನ ಕಾಲದಲ್ಲಿ ಶಿಶುಹತ್ಯೆಗೂ ಗರ್ಭಪಾತಕ್ಕೂ ಪ್ರೇರಕವಾಗಿರುತ್ತಿತ್ತು. ಇಂದು ಅದು ಮೂರನೆಯ ವಿಷಯದ ಕಡೆಗೆ ಅರ್ಥಾತ್, ಗರ್ಭನಿರೋಧದ ಕಡೆಗೆ ಜಗತ್ತನ್ನು ದೂಡುತ್ತಿದೆ. ಭ್ರೂಣಹತ್ಯೆಯು ಇಂದಿನ ಸಮಾಜದಲ್ಲಿ ವ್ಯಾಪಕವಾಗಿ ಚಾಲ್ತಿಯಲ್ಲಿರುವ ಸಂಗತಿಯಾಗಿದೆ. ಆದರೆ ಇಸ್ಲಾಮೀ ಪ್ರಣಾಳಿಕೆಯ ಈ

ನಿಬಂಧನೆಯು ಉಣ್ಣುವವರನ್ನು ಕಡಿತಗೊಳಿಸುವಂತಹ ವಿನಾಶಕರ ಯತ್ನವನ್ನು ಬಿಟ್ಟು ತಮ್ಮ ಶಕ್ತಿ ಸಾಮರ್ಥ್ಯಗಳನ್ನೂ ಅರ್ಹತೆಗಳನ್ನೂ ದೇವ ನಿರ್ಮಿತ ನೈಸರ್ಗಿಕ ನಿಯಮಗಳಿಗನುಸಾರ ಜೀವನಾಧಾರ ವೃದ್ಧಿಗೆ ಕಾರಣವಾಗುವಂತಹ ರಚನಾತ್ಮಕ ಯತ್ನಗಳಲ್ಲಿ ವಿನಿಯೋಗಿಸಬೇಕೆಂದು ಮಾನವನಿಗೆ ಮಾರ್ಗದರ್ಶನ ಮಾಡುತ್ತದೆ. ಜೀವನಾಧಾರಗಳನ್ನು ಒದಗಿಸುವುದು ತನ್ನ ಕೈಯಲ್ಲಿಲ್ಲವೆಂದೂ ಅದು ತನ್ನನ್ನು ಸೃಷ್ಟಿಸಿ ಪರಿಪಾಲಿಸಿ ಈ ಭೂಲೋಕದಲ್ಲಿ ತನ್ನನ್ನು ನೆಲೆಸುವಂತೆ ಮಾಡಿರುವ ಅಲ್ಲಾಹನ ಹಿಡಿತದಲ್ಲಿದೆಯೆಂಬುದನ್ನು ಮಾನವನು ಚೆನ್ನಾಗಿ ತಿಳಿದಿರಬೇಕು. ಅವನು ಹಿಂದಿನ ಸಮುದಾಯಕ್ಕೆ ಹೇಗೆ ಅನ್ನ ಒದಗಿಸಿದ್ದನೋ ಹಾಗೆಯೇ ಇನ್ನು ಬರುವವರಿಗೂ ಒದಗಿಸುವನು. ಈ ಭೂಮಿಯ ವಿವಿಧ ಭಾಗಗಳಲ್ಲಿ ಉಣ್ಣುವವರ ಸಂಖ್ಯೆ ಏರುತ್ತಾ ಹೋದಂತೆಲ್ಲಾ ಅದಕ್ಕನುಸಾರವಾಗಿ ಮತ್ತು ಕೆಲವೊಮ್ಮೆ ಅದಕ್ಕಿಂತಲೂ ಹೆಚ್ಚು ಉಪಜೀವನ ಸಾಧನಗಳು ವಿಸ್ತಾರಗೊಳ್ಳುತ್ತಾ ಹೋಗಿವೆ ಎಂಬುದು ಒಂದು ಐತಿಹಾಸಿಕ ಅನುಭವವಾಗಿದೆ. ಆದುದರಿಂದ ದೇವನ ಸೃಜನ ವ್ಯವಸ್ಥೆಗಳಲ್ಲಿ ಮಾನವನ ವೃಥಾ ಹಸ್ತಕ್ಷೇಪವು ಬರಿಯ ತಿಳಿಗೇಡಿತನವಲ್ಲದೇ ಬೇರೇನೂ ಅಲ್ಲ. ಕುರ್‌ಆನ್ ಅವತೀರ್ಣಗೊಳ್ಳುತ್ತಿದ್ದ ಕಾಲದಿಂದ ಇಂದಿನವರೆಗೆ ಮುಸ್ಲಿಮರಲ್ಲಿ ಸಂತಾನ ಹರಣದ ವ್ಯಾಪಕ ಒಲವು ಉಂಟಾಗದಿರುವುದಕ್ಕೆ ಈ ಶಿಕ್ಷಣವೇ ಕಾರಣವಾಗಿದೆ.

6. ಪ್ರಾಣಹರಣವೆಂದರೆ ಇತರ ಮಾನವರ ಹರಣ ಮಾತ್ರವಲ್ಲ, ಆತ್ಮಹತ್ಯೆಯೂ ಅದರಲ್ಲಿ ಸೇರುತ್ತದೆ. ಏಕೆಂದರೆ ಅಲ್ಲಾಹನು ಗೌರವಿಸಿರುವ ಪ್ರಾಣದಲ್ಲಿ ಇತರರ ಪ್ರಾಣಗಳಂತೆಯೇ ಮನುಷ್ಯನ ಸ್ವಂತ ಪ್ರಾಣವೂ ಸೇರಿದೆ. ಇತರ ಮಾನವರ ಹತ್ಯೆಯು ಎಷ್ಟು ದೊಡ್ಡ ಪಾಪ ಹಾಗೂ ಅಪರಾಧವೋ ಆತ್ಮಹತ್ಯೆಯೂ ಅಷ್ಟೇ ದೊಡ್ಡ ಪಾಪ ಮತ್ತು ಅಪರಾಧ. ಮನುಷ್ಯನು ಸ್ವ ಇಚ್ಛೆಯಿಂದ ತನ್ನ ಪ್ರಾಣವನ್ನು ಹರಣಗೈಯಲು ಅದೇನೂ ಅವನ ಸ್ವಂತ ಸ್ವತ್ತಲ್ಲ. ಅದು ಅಲ್ಲಾಹನ ಸೊತ್ತು. ಅದನ್ನು ನಾಶಗೊಳಿಸುವ ಮಾತಂತಿರಲಿ, ಅದನ್ನು ದುರುಪಯೋಗ ಪಡಿಸುವ ಅಧಿಕಾರವೂ ನಮಗಿಲ್ಲ.

7. ಇಸ್ಲಾಮೀ ಕಾನೂನು ನ್ಯಾಯಪೂರ್ಣ ವಧೆಯನ್ನು ಕೇವಲ ಐದು ವಿಷಯಗಳಿಗೆ ಪರಿಮಿತಗೊಳಿಸಿತು.

i. ಉದ್ದೇಶಪೂರ್ವಕ ಕೊಲೆ ಮಾಡಿದವನನ್ನು ಪ್ರತೀಕಾರಕ್ಕಾಗಿ ವಧಿಸುವುದು.

ii. ಸತ್ಯಧರ್ಮದ ಮಾರ್ಗಕ್ಕೆ ತಡೆಯೊಡ್ಡುವ ಶತ್ರುಗಳೊಡನೆ ಯುದ್ಧ.

iii. ಇಸ್ಲಾಮೀ ವ್ಯವಸ್ಥೆಯನ್ನು ಅಡಿಮೇಲುಗೊಳಿಸಲು ಪ್ರಯತ್ನಿಸಿದುದಕ್ಕೆ ಶಿಕ್ಷೆ.

iv. ವಿವಾಹಿತ ಸ್ತ್ರೀ ಅಥವಾ ಪುರುಷ ವ್ಯಭಿಚಾರವೆಸಗಿದುದಕ್ಕೆ ಶಿಕ್ಷೆ.

v. ಧರ್ಮ ಭ್ರಷ್ಟತೆಗೆ ಶಿಕ್ಷೆ.

ಮಾನವ ಜೀವದ ಗೌರವವು ರದ್ದುಗೊಂಡು ಅವನ ವಧೆಯು ಧರ್ಮಬದ್ಧವಾಗುವುದು ಈ ಐದು ರೂಪಗಳಲ್ಲಿ ಮಾತ್ರ

8. ವಧೆಯಲ್ಲಿ ಹದಮೀರುವ ರೂಪಗಳು ಅನೇಕವಿರಲು ಸಾಧ್ಯವಿದೆ. ಅವೆಲ್ಲವೂ ನಿಷಿದ್ಧವೇ- ಉದಾ: ಸೇಡು ತೀರಿಸುವ ಆವೇಶದಲ್ಲಿ ಅಪರಾಧಿಯನ್ನು ಮಾತ್ರವಲ್ಲದೇ ಇತರರನ್ನೂ ವಧಿಸುವುದು ಅಥವಾ ಅಪರಾಧಿಗೆ ಚಿತ್ರಹಿಂಸೆ ಕೊಟ್ಟು ಕೊಲ್ಲುವುದು ಅಥವಾ ಕೊಂದ ತರುವಾಯ ಆ ಮೃತ ದೇಹದ ಮೇಲೆ ಕೋಪ ಶಮನ ಮಾಡಿಕೊಳ್ಳುವುದು ಅಥವಾ ಪರಿಹಾರ ಧನ ಸ್ವೀಕರಿಸಿದ ಬಳಿಕವೂ ಅವನನ್ನು ವಧಿಸುವುದು ಇತ್ಯಾದಿ.



# 13. ನೀತಿ ಪಾಲಿಸಿರಿ

''ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯ ವಹಿಸುವವರೂ ಆಗಿರಿ.[1] ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ.'' (ಪವಿತ್ರ ಕುರ್‌ಆನ್,5:8)

''ಮುಸ್ಲಿಮರೇ, ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ಒಪ್ಪಿಸಿಕೊಡಿರೆಂದೂ ಜನರೊಳಗೆ ತೀರ್ಪು ನೀಡುವಾಗ ನ್ಯಾಯದೊಂದಿಗೆ ತೀರ್ಪು ನೀಡಿರೆಂದೂ[2] ಅಲ್ಲಾಹನು ನಿಮಗೆ ಆಜ್ಞೆ ವಿಧಿಸುತ್ತಾನೆ. ಅಲ್ಲಾಹನು ನಿಮಗೆ ಅತ್ಯುತ್ತಮ ಉಪದೇಶವನ್ನೀಯುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹ್ ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.''

(ಪವಿತ್ರ ಕುರ್‌ಆನ್,4:58)

''ಅಲ್ಲಾಹ್ ನ್ಯಾಯ, ಪರೋಪಕಾರ ಹಾಗೂ ಆಪ್ತೇಷ್ಟರ ಬಗ್ಗೆ ಸೌಜನ್ಯದ ಆಜ್ಞೆ ನೀಡುತ್ತಾನೆ ಮತ್ತು ಅಶ್ಲೀಲ ಕಾರ್ಯ, ದುಷ್ಕೃತ್ಯ, ಅಕ್ರಮ, ಅತ್ಯಾಚಾರಗಳನ್ನು ನಿಷೇಧಿಸುತ್ತಾನೆ.[4] ನೀವು ಜಾಗೃತರಾಗಲಿಕ್ಕಾಗಿ ಅವನು ನಿಮಗೆ ಉಪದೇಶ ನೀಡುತ್ತಾನೆ.'' (ಪವಿತ್ರ ಕುರ್‌ಆನ್,16:90)

''ನೀವು ಅಲ್ಲಾಹನೊಡನೆ ಕರಾರು ಮಾಡಿಕೊಂಡಿದ್ದರೆ ಅದನ್ನು ಪಾಲಿಸಿರಿ. ನೀವು ಅಲ್ಲಾಹನನ್ನು ನಿಮ್ಮ ಮೇಲೆ ಸಾಕ್ಷ್ಯ ನಿಲ್ಲಿಸಿಕೊಂಡು ಮಾಡಿದ ಪ್ರತಿಜ್ಞೆಗಳನ್ನು ಮುರಿಯಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಸಕಲ ಕರ್ಮಗಳನ್ನೂ ಅಲ್ಲಾಹನು ತಿಳಿದಿರುತ್ತಾನೆ.''

(ಪವಿತ್ರ ಕುರ್‌ಆನ್,16:91)

''ಅಳತೆ ಪಾತ್ರೆಯನ್ನು ಸರಿಯಾಗಿ ತುಂಬಿರಿ ಮತ್ತು ಯಾರಿಗೂ ಕಡಿಮೆ ಕೊಡಬೇಡಿರಿ. ಸರಿಯಾದ ತಕ್ಕಡಿಯಲ್ಲಿ ತೂಗಿರಿ.'' (ಪವಿತ್ರ ಕುರ್‌ಆನ್,26:181,182)

''ಅಳತೆ ಮಾಡಿ ಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ. ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿಯಿಂದಲೂ ಇದುವೇ ಉತ್ತಮ.'' (ಪವಿತ್ರ ಕುರ್‌ಆನ್,17:35)

''ಪತ್ನಿಯರ ನಡುವೆ ಸರ್ವಸಂಪೂರ್ಣ ನ್ಯಾಯ ಪಾಲಿಸಲು ನಿಮ್ಮಿಂದ ಸಾಧ್ಯವಾಗದು. ನೀವು ಇಚ್ಛಿಸಿದರೂ ಅದು ನಿಮ್ಮಿಂದ ಸಾಧ್ಯವಾಗದು. ಆದುದರಿಂದ ಒಬ್ಬ ಪತ್ನಿಯು ಅತ್ತ ಜೋತಾಡಿ ಕೊಂಡಿರುವಂತೆ ಬಿಟ್ಟು ಇನ್ನೊಬ್ಬಳ ಕಡೆಗೇ ವಾಲಿಬಿಡಬೇಡಿರಿ.[5]

(ದೇವ ಶಾಸನೋದ್ದೇಶವನ್ನು ಪೂರೈಸಲು ಇಷ್ಟು ಸಾಕು.) ನೀವು ನಿಮ್ಮ ವರ್ತನೆಯನ್ನು ಸರಿಯಾಗಿಟ್ಟುಕೊಂಡರೆ ಮತ್ತು ಅಲ್ಲಾಹನಿಗೆ ಭಯಪಟ್ಟುಕೊಂಡಿದ್ದರೆ ಅಲ್ಲಾಹನು ಕ್ಷಮಿಸುವವನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್,4:129)

''ಸತ್ಯವಿಶ್ವಾಸಿಗಳಲ್ಲಿ ಎರಡು ಗುಂಪುಗಳು ಪರಸ್ಪರ ಜಗಳಾಡಿದರೆ, ಅವರ ನಡುವೆ ಸಂಧಾನ ಮಾಡಿಸಿರಿ. ಅವರಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಅತಿರೇಕವೆಸಗಿದರೆ, ಅತಿರೇಕವೆಸಗಿದವರು ಅಲ್ಲಾಹನ ಆದೇಶದೆಡೆಗೆ ಮರಳಿ ಬರುವವರೆಗೂ ಅವರ ವಿರುದ್ಧ ಹೋರಾಡಿರಿ.[6] ತರುವಾಯ ಅವರು ಮರಳಿ ಬಂದರೆ, ಅವರ ಮಧ್ಯೆ ನ್ಯಾಯಪೂರ್ಣ ಸಂಧಾನ ಮಾಡಿಸಿಬಿಡಿರಿ ಮತ್ತು ನ್ಯಾಯವನ್ನು ಪಾಲಿಸಿರಿ. ಅಲ್ಲಾಹನು ನ್ಯಾಯ ಪರಿಪಾಲಕರನ್ನು ಪ್ರೀತಿಸುತ್ತಾನೆ.'' (ಪವಿತ್ರ ಕುರ್‌ಆನ್,49:9)

## ಟಿಪ್ಪಣಿ

1. ನ್ಯಾಯ ನೀತಿಯಿಂದ ನಡೆಯಿರಿ ಮತ್ತು ಸತ್ಯದಲ್ಲೇ ನೆಲೆನಿಲ್ಲಿರಿ ಎಂದು ಹೇಳಿ ಅಲ್ಲಿಗೆ ಮುಗಿಸಿ ಬಿಡಲಿಲ್ಲ, ನ್ಯಾಯದ ಧ್ವಜವಾಹಕರಾಗಿರಿ ಎನ್ನಲಾಗಿದೆ. ನ್ಯಾಯ ತೋರುವುದು ಮಾತ್ರ ನಿಮ್ಮ ಕೆಲಸವಾಗಿರಬಾರದು, ನೀವು ನ್ಯಾಯದ ಧ್ವಜವನ್ನು ಎತ್ತಬೇಕು. ಅಕ್ರಮ-ಅತ್ಯಾಚಾರಗಳು ಅಳಿದು ಅವುಗಳ ಸ್ಥಾನದಲ್ಲಿ ನ್ಯಾಯ-ನೀತಿಗಳು ನೆಲೆಗೊಳ್ಳುವಂತೆ ಮಾಡಲು ಟೊಂಕಕಟ್ಟಬೇಕು. ನ್ಯಾಯ ಸ್ಥಾಪನೆಗೊಳ್ಳಬೇಕಾದರೆ ಅದಕ್ಕೆ ಬೆಂಬಲ ಸಿಗಬೇಕಷ್ಟೆ. ಸತ್ಯ ವಿಶ್ವಾಸಿಗಳೆಂಬ ನೆಲೆಯಲ್ಲಿ ನೀವು ಅದರ ಬೆಂಬಲಿಗರಾಗಬೇಕು.

2. ಅರ್ಥಾತ್, ನೀವು ಬನೀ ಇಸ್ರಾಈಲರು ಸಿಲುಕಿಹೋದ ಆ ಕೆಡುಕುಗಳಿಂದ ದೂರವಿರಬೇಕು. ಬನೀ ಇಸ್ರಾಈಲರು ತಮ್ಮ ಅಧೋಗತಿಯ ಕಾಲದಲ್ಲಿ ಅಮಾನತ್‌ಗಳನ್ನು, ಅಂದರೆ ಹೊಣೆಗಾರಿಕೆಯ ಉನ್ನತ ಹುದ್ದೆಗಳನ್ನೂ ಧಾರ್ಮಿಕ ಮುಖಂಡತ್ವವನ್ನೂ ರಾಷ್ಟ್ರ ನಾಯಕತ್ವಗಳನ್ನೂ ಅಯೋಗ್ಯ, ಕಿಡಿಗೇಡಿ, ನೀತಿಬಾಹಿರ, ಅಪ್ರಾಮಾಣಿಕ ಮತ್ತು ದುಷ್ಕರ್ಮಿಗಳಿಗೆ ವಹಿಸಿಕೊಡಲಾರಂಭಿಸಿದುದು ಅವರ ಅತಿ ಮುಖ್ಯ ಅಪರಾಧಗಳಲ್ಲೊಂದು. ಇದರ ಪರಿಣಾಮವಾಗಿ ದುಷ್ಟರ ಮುಂದಾಳುತನದಲ್ಲಿ ಇಡೀ ಜನಾಂಗವೇ ಕೆಟ್ಟು ಹೋಗಲಾರಂಭಿಸಿತು. ಇಲ್ಲಿ, ನೀವು ಹಾಗೆ ಮಾಡಬಾರದೆಂದೂ ಅಮಾನತ್‌ಗಳನ್ನು ಅದರ ಅರ್ಹರಿಗೆ ಒಪ್ಪಿಸಬೇಕೆಂದೂ ಮುಸ್ಲಿಮರಿಗೆ ಬೋಧಿಸಲಾಗುತ್ತಿದೆ. ಬನೀ ಇಸ್ರಾಈಲರ ಇನ್ನೊಂದು ಅಪರಾಧವೆಂದರೆ- ಅವರು ನ್ಯಾಯಶೀಲತೆಯನ್ನು ಕಳೆದುಕೊಂಡಿದ್ದುದು. ಅವರು ವೈಯಕ್ತಿಕ ಹಾಗೂ ರಾಜಕೀಯ ಉದ್ದೇಶಗಳಿಗಾಗಿ ಸತ್ಯವಿಶ್ವಾಸವನ್ನು ಬಲಿಕೊಡುತ್ತಿದ್ದರು. ಹಟಮಾರಿತನ ಮತ್ತು ನ್ಯಾಯನೀತಿಗಳ ಕೊಲೆ ಮಾಡಲು ಕಿಂಚಿತ್ತೂ ಹೇಸುತ್ತಿರಲಿಲ್ಲ, ಒಂದು ಕಡೆ ಹ. ಮುಹಮ್ಮದ್(ಸ) ಮತ್ತು ಅವರ ಮೇಲೆ ವಿಶ್ವಾಸವಿಟ್ಟಿದ್ದವರ ನಿರ್ಮಲ ಜೀವವಿತ್ತು. ಇನ್ನೊಂದು ಕಡೆ ವಿಗ್ರಹಾರಾಧಕರೂ ಹೆಣ್ಣು

ಮಕ್ಕಳನ್ನು ಜೀವಂತ ಹುಗಿದು ಬಿಡುವವರೂ ಮಲ ತಾಯಿಯೊಂದಿಗೆ ವಿವಾಹ ಮಾಡಿಕೊಳ್ಳುವವರೂ ಕಅಬಾದ ಸುತ್ತಲೂ ಬೆತ್ತಲೆಯಾಗಿ ಪ್ರದಕ್ಷಿಣೆ ಮಾಡುವವರೂ ಇದ್ದರು. ಅಲ್ಲಾಹನು ಇವರ ಈ ಅನ್ಯಾಯದ ಬಗ್ಗೆ ಎಚ್ಚರಿಕೆ ಕೊಟ್ಟ ಬಳಿಕ ಮುಸ್ಲಿಮರಿಗೆ ''ನೀವೆಂದೂ ಅನ್ಯಾಯಿಗಳಾಗಬಾರದು. ನಿಮಗೆ ಯಾರೊಂದಿಗಾದರೂ ಹಗೆತನವಿರಲಿ ಅಥವಾ ಗೆಳೆತನವಿರಲಿ, ಯಾವ ಸಂದರ್ಭದಲ್ಲೂ ಮಾತಾಡುವಾಗ ನ್ಯಾಯ ನೀತಿಯ ಮಾತುಗಳನ್ನೇ ಆಡಿರಿ, ತೀರ್ಪು ನೀಡುವಾಗ ನಿಷ್ಪಕ್ಷಪಾತ ತೀರ್ಪನ್ನೇ ನೀಡಿರಿ'' ಎಂದು ಬೋಧಿಸುತ್ತಾನೆ.

3. ಇಲ್ಲಿ ಸಂಪೂರ್ಣ ಮಾನವ ಸಮಾಜದ ದುರಸ್ತಿಗೆ ಆಧಾರವಾದ ಮೂರು ವಿಷಯಗಳ ಆಜ್ಞೆ ನೀಡಲಾಗಿದೆ. ಒಂದನೆಯ ವಿಷಯವು ನ್ಯಾಯ. ಇದರ ವಿಭಾವನೆಯಲ್ಲಿ ಎರಡು ಸ್ಥಾಯೀ ವಸ್ತುಸ್ಥಿತಿಗಳು ಒಳಗೊಂಡಿವೆ. 1) ಜನರ ಮಧ್ಯೆ ಹಕ್ಕುಗಳಲ್ಲಿ ಸಮತೋಲನ ಮತ್ತು ಸಮಾನತೆಯನ್ನು ನೆಲೆಸುವುದು. 2) ಪ್ರತಿಯೊಬ್ಬನಿಗೆ ಅವನವನ ಹಕ್ಕನ್ನು ವಸ್ತುನಿಷ್ಠ ರೀತಿಯಲ್ಲಿ ಕೊಡುವುದು.

ಎರಡನೆಯ ವಿಷಯವು 'ಇಹ್ಸಾನ್' (ಪರೋಪಕಾರ) ಆದರ ಅರ್ಥ ಸದ್ವರ್ತನೆ, ಉದಾರತೆಯ ವ್ಯವಹಾರ, ಸಹಾನುಭೂತಿಯ ನಿಲುಮೆ, ಹಿತ ಚಿಂತನೆ, ಸದ್ಗುಣ, ಕ್ಷಮೆ, ಗಮನ, ಪರಸ್ಪರ ಗೌರವ, ಬೇರೆಯವರಿಗೆ ಅವರ ಹಕ್ಕಿಗಿಂತ ಸ್ವಲ್ಪ ಹೆಚ್ಚು ಕೊಡುವುದು ಮತ್ತು ತಾನು ತನ್ನ ಹಕ್ಕಿಗಿಂತ ಕಡಿಮೆ ಪಡೆಯುವುದು. ಇದು ನ್ಯಾಯಕ್ಕಿಂತ ಮಿಗಿಲಾದ ಒಂದು ವಿಷಯವಾಗಿದ್ದು ಸಾಮೂಹಿಕ ಜೀವನದಲ್ಲಿ 'ಅದ್ಲ್'(ನ್ಯಾಯ)ಗಿಂತಲೂ ಹೆಚ್ಚು ಮಹತ್ವಪೂರ್ಣವಾಗಿದೆ. ಅದ್ಲ್ ಸಮಾಜದ ಬುನಾದಿಯಾಗಿದ್ದರೆ ಇಹ್ಸಾನ್ ಆದರ ಸೌಂದರ್ಯ ಮತ್ತು ಪರಿಪೂರ್ಣತೆಯಾಗಿದೆ. ಅದ್ಲ್ ಸಮಾಜವನ್ನು ಅಪ್ರಿಯತೆಯಿಂದಲೂ ಅತೃಪ್ತಿಯಿಂದಲೂ ರಕ್ಷಿಸುವುದಿದ್ದರೆ ಇಹ್ಸಾನ್ ಅದರಲ್ಲಿ ಮಾಧುರ್ಯವನ್ನೂ ಮನೋಹರತೆಯನ್ನೂ ಉಂಟುಮಾಡುತ್ತದೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ತನಗೆ ಸಿಗಬೇಕಾದ ಹಕ್ಕನ್ನು ಸರಿಯಾಗಿ ಅಳೆದು ತೂಗಿ ಅದನ್ನು ಸಂಪೂರ್ಣವಾಗಿ ವಸೂಲು ಮಾಡಿದರೆ ಮತ್ತು ಬೇರೆಯವರಿಗೂ ಅಷ್ಟನ್ನು ಮಾತ್ರ ಕೊಟ್ಟರೆ ಈ ಆಧಾರದಲ್ಲಿ ಯಾವ ಸಮಾಜವೂ ನಿಲ್ಲಲಾರದು. ಇಂತಹ ಒಂದು ತಣ್ಣಗಿನ, ಬರಡು ಸಮಾಜದಲ್ಲಿ ಸಂಘರ್ಷಗಳೇನೋ ಇರಲಾರವು, ಆದರೆ ಪ್ರೇಮ, ಕೃತಜ್ಞತೆ, ಹೃದಯವೈಶಾಲ್ಯ, ತ್ಯಾಗ, ನಿಷ್ಕಾಪಟ್ಯ ಮತ್ತು ಹಿತಚಿಂತನೆಯಂತಹ ಮೌಲ್ಯಗಳಿಂದ ಅದು ವಂಚಿತವಾಗಿರುವುದು. ವಸ್ತುತಃ ಇವು ಜೀವನದಲ್ಲಿ ಕಳೆ, ಕಾಂತಿಗಳನ್ನುಂಟು ಮಾಡುವ ಮತ್ತು ಸಾಮೂಹಿಕ ಗುಣಗಳನ್ನು ಬೆಳೆಸುವಂತಹ ಮೌಲ್ಯಗಳಾಗಿವೆ.

ಈ ಸೂಕ್ತದಲ್ಲಿ ಆಜ್ಞಾಪಿಸಲಾಗಿರುವ ಮೂರನೆಯ ವಿಷಯವು ಸ್ವಜನ ಪ್ರೇಮ, ಇದು ನಿಕಟ ಸಂಬಂಧಿಕರ ವಿಷಯದಲ್ಲಿ ಸದ್ವರ್ತನೆಯ ಒಂದು ವಿಶಿಷ್ಟ ಸ್ವರೂಪವನ್ನು ರೂಪಿಸಿ ಕೊಡುತ್ತದೆ. ತನ್ನ ಸಂಬಂಧಿಕರೊಂದಿಗೆ ಒಳ್ಳೆಯ ರೂಪದಲ್ಲಿ ನಡೆದುಕೊಳ್ಳಬೇಕೆಂದು ಮಾತ್ರ ಇದರ ಅರ್ಥವಲ್ಲ. ಪ್ರತಿಯೊಬ್ಬ ಸ್ಥಿತಿವಂತನು ತನ್ನ ಸಂಪತ್ತಿನ ಮೇಲೆ ತನಗೆ ಮತ್ತು ತನ್ನ

ಮಕ್ಕಳು ಮರಿಗಳಿಗೆ ಮಾತ್ರ ಹಕ್ಕಿರುವುದೆಂದು ತಿಳಿದುಕೊಳ್ಳಬಾರದು. ತನ್ನ ಸಂಬಂಧಿಕರ ಹಕ್ಕನ್ನೂ ಒಪ್ಪಿಕೊಳ್ಳಬೇಕು. ದೇವ ಧರ್ಮಶಾಸ್ತ್ರವು ಪ್ರತಿಯೊಂದು ಕುಟುಂಬದ ವ್ಯಕ್ತಿಗಳು, ತಮ್ಮ ಕುಟುಂಬದವರನ್ನು ಹೊಟ್ಟೆಗೆ ಮತ್ತು ಬಟ್ಟೆಗಿಲ್ಲದಂತೆ ಬಿಟ್ಟು ಬಿಡಬಾರದೆಂದೂ ಅದಕ್ಕೆ ಅವರು ಹೊಣೆಗಾರರೆಂದೂ ಸಾರುತ್ತದೆ.

4. ಇಲ್ಲಿ ಮೇಲೆ ಹೇಳಿದ ಮೂರು ಒಳಿತುಗಳ ವಿರುದ್ಧವಾಗಿ ಮೂರು ಕೆಡುಕುಗಳಿಂದ ಅಲ್ಲಾಹ್ ತಡೆಯುತ್ತಾನೆ. ಇವು ವೈಯಕ್ತಿಕವಾಗಿ ವ್ಯಕ್ತಿಗಳನ್ನೂ ಸಾಮೂಹಿಕವಾಗಿ ಸಮಾಜವನ್ನೂ ಕೆಡಿಸುವಂತಹವುಗಳು.

i. 'ಫಹ್‌ಶಾ', (ಅಶ್ಲೀಲ ಕಾರ್ಯಗಳು). ಇದರಲ್ಲಿ ಎಲ್ಲಾ ಅಸಂಬದ್ಧ ಹಾಗೂ ಲಜ್ಜಾಸ್ಪದ ಕಾರ್ಯಗಳೂ ಸೇರುತ್ತವೆ. ವಸ್ತುತ ಅತ್ಯಂತ ನೀಚವಾದ ಕೆಡುಕಗಳೆಲ್ಲಾ ಅಶ್ಲೀಲವಾಗಿವೆ. ಉದಾ: ಜಿಪುಣತೆ, ವ್ಯಭಿಚಾರ, ನಗ್ನತೆ, ಅರೆ ನಗ್ನತೆ, ಸಲಿಂಗರತಿ, ನಿಷೇಧಿಸಲ್ಪಟ್ಟವರೊಂದಿಗೆ ವಿವಾಹ, ಕಳ್ಳತನ, ಮದ್ಯಪಾನ, ಭಿಕ್ಷಾಟನೆ, ಬಯ್ಗುಳ, ದುರ್ನುಡಿ ಇತ್ಯಾದಿ. ಇದೇ ರೀತಿಯಲ್ಲಿ ಬಹಿರಂಗವಾಗಿ ದುಷ್ಕರ್ಮಗಳನ್ನೆಸಗುವುದು ಮತ್ತು ಕೆಡುಕುಗಳನ್ನು ಹಬ್ಬಿಸುವುದು ಅಶ್ಲೀಲವಾಗಿರುತ್ತದೆ. ಉದಾ: ಸುಳ್ಳು ಪ್ರಚಾರ, ಸುಳ್ಳಾರೋಪ ಹೊರಿಸುವುದು, ಮರೆಯಲ್ಲಿ ಮಾಡಿದ ಪಾಪಕಾರ್ಯಗಳನ್ನು ಪ್ರಚಾರ ಮಾಡುವುದು, ದುರಾಚಾರಗಳನ್ನು ಪ್ರೋತ್ಸಾಹಿಸುವಂತಹ ಕಥೆ, ಕಾದಂಬರಿಗಳು, ನಾಟಕಗಳು, ಚಲನಚಿತ್ರಗಳು, ನಗ್ನ ಚಿತ್ರಗಳು, ಸ್ತ್ರೀಯರು ಶೃಂಗಾರಗಳೊಂದಿಗೆ ಸಾರ್ವಜನಿಕ ಸ್ಥಳಗಳಲ್ಲಿ ಮೆರೆದಾಡುವುದು, ಬಹಿರಂಗವಾಗಿ ಸ್ತ್ರೀ ಪುರುಷರ ಸಮ್ಮಿಲನ, ರಂಗಸ್ಥಳದಲ್ಲಿ ಸ್ತ್ರೀಯರ ನರ್ತನ, ಕುಣಿತ ಮತ್ತು ಒನಪು ಒಯ್ಯಾರಗಳ ಪ್ರದರ್ಶನ.

ii. 'ಮುಂಕರ್' (ದುಷ್ಕೃತ್ಯ) ಅಂದರೆ ಮನುಷ್ಯನು ಸರ್ವ ಸಾಮಾನ್ಯ ಕೆಡುಕುಗಳೆಂದು ತಿಳಿಯುವ ಮತ್ತು ಸದಾ ಕೆಡುಕುಗಳೆಂದೇ ತಿಳಿಯುತ್ತಿದ್ದ ಎಲ್ಲ ವಿಷಯಗಳು ಹಾಗೂ ಸಕಲ ಧರ್ಮಶಾಸ್ತ್ರಗಳಲ್ಲೂ ನಿಷೇಧಿಸಲ್ಪಟ್ಟವುಗಳು.

iii. ಅಕ್ರಮ ಅರ್ಥಾತ್ ತನ್ನ ಮಿತಿಯನ್ನು ಮೀರುವುದು ಮತ್ತು ಇತರರ ಹಕ್ಕುಗಳಿಗೆ ಕೈ ಹಾಕುವುದು. ಅದು ಸೃಷ್ಟಿಕರ್ತನ ಹಕ್ಕಾದರೂ ಸರಿಯೆ, ಸೃಷ್ಟಿಗಳ ಹಕ್ಕಾದರೂ ಸರಿಯೆ.

5. ಇದರ ತಾತ್ಪರ್ಯವೇನೆಂದರೆ ಒಬ್ಬ ಪುರುಷನು ಎಲ್ಲ ಕಾಲಗಳಲ್ಲೂ ಎಲ್ಲ ಸ್ಥಿತಿಗಳಲ್ಲೂ ಇಬ್ಬರು ಅಥವಾ ಹೆಚ್ಚು ಮಂದಿ ಪತ್ನಿಯರೊಂದಿಗೆ ಸಮಾನತೆಯಿಂದ ವ್ಯವಹರಿಸಲಾರ. ಒಬ್ಬಳು ರೂಪವತಿಯಾಗಿದ್ದರೆ ಇನ್ನೊಬ್ಬಳು ರೂಪವತಿಯಾಗಿರುವುದಿಲ್ಲ. ಒಬ್ಬಳು ಎಳೆ ಪ್ರಾಯದವಳಾಗಿದ್ದರೆ ಇನ್ನೊಬ್ಬಳು ಹೆಚ್ಚು ಪ್ರಾಯದವಳಾಗಿರುತ್ತಾಳೆ. ಒಬ್ಬಳು ನಿತ್ಯ ರೋಗಿಯಾಗಿದ್ದರೆ ಇನ್ನೊಬ್ಬಳು ಆರೋಗ್ಯವಂತಳಾಗಿರುತ್ತಾಳೆ. ಒಬ್ಬಳು ಸಿಡುಕು ಸ್ವಭಾವದವಳಾಗಿದ್ದರೆ ಇನ್ನೊಬ್ಬಳು ಸೌಮ್ಯ ಸ್ವಭಾವದವಳಾಗಿರುತ್ತಾಳೆ. ಇದೇ ರೀತಿಯಲ್ಲಿ ಇತರ ತಾರತಮ್ಯಗಳೂ ಇರಬಹುದು. ಇದರಿಂದ ಓರ್ವ ಪತ್ನಿಯೊಂದಿಗೆ ಸ್ವಾಭಾವಿಕವಾಗಿ ಹೆಚ್ಚು

ಒಲವೂ ಇನ್ನೊಬ್ಬಳೊಂದಿಗೆ ಕಡಿಮೆ ಒಲವೂ ಇರಬಹುದು. ಇಂತಹ ಸ್ಥಿತಿಯಲ್ಲಿ ಪ್ರೇಮ, ಒಲವು ಮತ್ತು ದೇಹ ಸಂಬಂಧಗಳಲ್ಲಿ ಸಮಾನತೆ ಇರಲೇಬೇಕೆಂದು ಕಾನೂನು ವಿಧಿಸುವುದಿಲ್ಲ. ನೀವು ಒಲವಿಲ್ಲದಿದ್ದರೂ ಒಬ್ಬಳನ್ನು ತಲಾಕ್ ಕೊಡದೆ, ನಿಮ್ಮ ಸ್ವಂತ ಇಚ್ಛೆಯಿಂದಾಗಲಿ, ಅವಳ ಇಚ್ಛೆಯಿಂದಾಗಲಿ ಪತ್ನಿಯ ನೆಲೆಯಲ್ಲೇ ಇರಗೂಡಿಸುವುದಾದಲ್ಲಿ ಅವಳನ್ನು ಕಾರ್ಯತಃ ಪತಿಹೀನಳಂತೆ ಮಾಡಿಬಿಡುವಷ್ಟು ಅವಳೊಂದಿಗೆ ಸಂಬಂಧ ಕಡಿದುಕೊಳ್ಳಬೇಡಿರಿ. ಇಂತಹ ಸ್ಥಿತಿಯಲ್ಲಿ ಒಬ್ಬ ಪತ್ನಿಗಿಂತ ಇನ್ನೊಬ್ಬ ಪತ್ನಿಯ ಕಡೆಗೆ ಅಧಿಕ ಒಲವಿರುವುದು ಸ್ವಾಭಾವಿಕವೇ. ಆದರೆ ಅವಳಿಗೆ ಗಂಡನೇ ಇಲ್ಲವೆಂಬಂತೆ ಅವಳು ಜೋತಾಡಿಕೊಂಡಿರುವಂತೆ ಆಗಬಾರದು.

6. ಅರ್ಥಾತ್, ಈ ಹೋರಾಟದ ಉದ್ದೇಶ ಅತಿರೇಕವೆಸಗಿದವರನ್ನು, ಅವರು ಅಲ್ಲಾಹನ ಆಜ್ಞೆಯೆಡೆಗೆ ಮರಳುವಂತೆ ನಿರ್ಬಂಧಿಸುವುದಾಗಿದೆಯೇ ಹೊರತು ಅತಿರೇಕವೆಸಗಿದಕ್ಕಾಗಿ ಅವರನ್ನು ಶಿಕ್ಷಿಸುವುದು ಉದ್ದೇಶವಲ್ಲ. ಅಲ್ಲಾಹನ ಆಜ್ಞೆಯೆಡೆಗೆ ಮರಳುವುದೆಂದರೆ ದಿವ್ಯಗ್ರಂಥ ಮತ್ತು ಪ್ರವಾದಿಚರ್ಯೆಯ ಪ್ರಕಾರ ಯಾವುದು ಸತ್ಯವೋ ಅದನ್ನು ಸ್ವೀಕರಿಸಲು ಈ ಬಂಡುಗಾರ ಗುಂಪು ಸಿದ್ಧವಾಗುವುದು.



# 14. ಕರಾರು ಉಲ್ಲಂಘನೆ ಮಾಡಬಾರದು

''ಅನಾಥನ ಸೊತ್ತನ್ನು ಉತ್ತಮ ರೀತಿಯಿಂದಲ್ಲದೆ ಸಮೀಪಿಸ ಬಾರದು (ಇದು) ಅವನು ಯೌವನಾವಸ್ಥೆಗೆ ತಲಪುವ ತನಕ. ವಚನವನ್ನು ಪಾಲಿಸಿರಿ. ನಿಶ್ಚಯವಾಗಿಯೂ ವಚನದ ಕುರಿತು ನಿಮ್ಮನ್ನು ಪ್ರಶ್ನಿಸಲಾಗುವುದು.'' (ಪವಿತ್ರ ಕುರ್‌ಆನ್,17:34)

''ಅನಾಥರು ಪ್ರಬುದ್ಧರಾಗುವ ವರೆಗೆ ಅತ್ಯುತ್ತಮ ರೀತಿಯ ಹೊರತು ಅವರ ಸೊತ್ತಿನ ಬಳಿ ಸುಳಿಯಬೇಡಿರಿ. ಅಳತೆ ಮತ್ತು ತೂಕಗಳಲ್ಲಿ ಸಂಪೂರ್ಣ ನ್ಯಾಯದೊಂದಿಗೆ ವರ್ತಿಸಿರಿ. ನಾವು ಪ್ರತಿಯೊಬ್ಬನ ಮೇಲೆ ಅವನಿಂದ ಹೊರಲಿಕ್ಕಾಗುವಷ್ಟು ಹೊಣೆಗಾರಿಕೆಯ ಭಾರವನ್ನು ಮಾತ್ರ ಹೊರಿಸುತ್ತೇವೆ. ವಿಷಯವು ನಿಮ್ಮ ಆಪ್ತ ಬಂಧುಗಳಿಗೆ ಸಂಬಂಧಿಸಿದುದೇ ಆಗಿದ್ದರೂ ಮಾತಾಡುವಾಗ ನ್ಯಾಯಪೂರ್ವಕವಾಗಿಯೇ ಮಾತಾಡಿರಿ ಮತ್ತು ಅಲ್ಲಾಹನ ಕರಾರನ್ನು ಪೂರ್ತಿಗೊಳಿಸಿರಿ.[1] ನೀವು ಉಪದೇಶ ಸ್ವೀಕರಿಸಬಹುದೆಂದು ನಿರೀಕ್ಷಿಸಿ ಅಲ್ಲಾಹನು ಈ ವಿಷಯಗಳ ಆದೇಶವನ್ನು ನಿಮಗೆ ನೀಡಿದ್ದಾನೆ.'' (ಪವಿತ್ರ ಕುರ್‌ಆನ್,6:152)

''ಅಲ್ಲಾಹನ ಜೊತೆ ದೃಢವಾದ ಕರಾರು ಮಾಡಿಕೊಂಡ ಬಳಿಕ ಅದನ್ನು ಮುರಿದು ಹಾಕುವವರು,[2] ಅಲ್ಲಾಹನು ಜೋಡಿಸಲು ಆಜ್ಞಾಪಿಸಿದುದನ್ನು ಮುರಿದು ಹಾಕುವವರು' ಮತ್ತು ಭೂಮಿಯ ಮೇಲೆ ಕ್ಷೋಭೆಯನ್ನುಂಟು ಮಾಡುವವರು. ಯಥಾರ್ಥವಾಗಿ ಇವರೇ ನಷ್ಟಕ್ಕೊಳಗಾಗುವವರು.'' (ಪವಿತ್ರ ಕುರ್‌ಆನ್,2:27)

## ಟಿಪ್ಪಣಿ

1. ಅಲ್ಲಾಹನ ಕರಾರೆಂದರೆ ಮಾನವನು ತನ್ನ ದೇವನೊಂದಿಗೆ ಮಾಡುವ ಕರಾರೂ ಹೌದು. ಅಲ್ಲಾಹನ ಹೆಸರಿಂದ ಜನರೊಡನೆ ಮಾಡುವ ಕರಾರೂ ಹೌದು. ಓರ್ವ ವ್ಯಕ್ತಿಯು ದೇವ ನಿರ್ಮಿತವಾದ ಈ ಭೂಮಿಯಲ್ಲಿ ಮತ್ತು ಒಂದು ಮಾನವ ಸಮಾಜದಲ್ಲಿ ಜನಿಸಿದ ಮರುಕ್ಷಣದಲ್ಲೇ ಮಾನವ ಮತ್ತು ಅಲ್ಲಾಹ್ ಹಾಗೂ ಮಾನವ-ಮಾನವರ ನಡುವೆ ತಾನಾಗಿಯೇ ಬಿಗಿಯಲ್ಪಡುವ ಕರಾರೂ ಹೌದು.

2. ಅರ್ಥಾತ್, ಮಾನವನ ಸಾಮೂಹಿಕ ಹಾಗೂ ವೈಯಕ್ತಿಕ ಅಭ್ಯುದಯವು ಕೆಲವು ತರದ ಸಂಬಂಧಗಳ ಸ್ಥಿರಪಡಿಸುವಿಕೆಯನ್ನು ಅವಲಂಬಿಸಿಕೊಂಡಿದ್ದು ಅವುಗಳನ್ನು ಸ್ಥಿರವಾಗಿಡಲು

ಅಲ್ಲಾಹನೇ ಆದೇಶಿಸಿರುವನು. ಅಂತಹ ಸಂಬಂಧಗಳ ಮೇಲೆಯೇ ಇವರು ಕೊಡಲಿಯೇಟು ಹಾಕುತ್ತಾರೆ.

3. ಕ್ಷೋಭೆಯೇ ಅಲ್ಲಾಹ್ ಮತ್ತು ಅವನ ದಾಸರೊಳಗಿನ ಸಂಬಂಧ ಮತ್ತು ಮನುಷ್ಯ ಮನುಷ್ಯರೊಳಗಿನ ಸಂಬಂಧಗಳನ್ನು ಮುರಿಯುವುದರ ಅನಿವಾರ್ಯ ಪರಿಣಾಮವಾಗಿದ್ದು ಈ ಕ್ಷೋಭೆಯನ್ನುಂಟು ಮಾಡುವವನೇ 'ಫಾಸಿಕ್'(ಧರ್ಮಭ್ರಷ್ಟ) ಆಗಿರುತ್ತಾನೆ.



# 15. ಜನರೊಡನೆ ಉತ್ತಮವಾಗಿ ವರ್ತಿಸಿರಿ.

''ಅಲ್ಲಾಹನ ಹೊರತು ಬೇರೆ ಯಾರ ದಾಸ್ಯ-ಆರಾಧನೆಯನ್ನೂ ಮಾಡಬಾರದೆಂದೂ ಮಾತಾಪಿತರು, ಬಂಧು ಬಳಗದವರು, ಅನಾಥರು ಮತ್ತು ನಿರ್ಗತಿಕರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದೂ ಜನರೊಡನೆ ಒಳ್ಳೆಯ ಮಾತುಗಳನ್ನಾಡಬೇಕೆಂದೂ ನಮಾಝುನ್ನು ಸಂಸ್ಥಾಪಿಸಬೇಕೆಂದೂ 'ಝಕಾತ್' (ಕಡ್ಡಾಯದಾನ) ಕೊಡಬೇಕೆಂದೂ ನಾವು ಇಸ್ರಾಈಲ್ ಸಂತತಿಯವರಿಂದ ಬಲವಾದ ಕರಾರನ್ನು ಪಡೆದ ಆ ಸಂದರ್ಭವನ್ನು ಸ್ಮರಿಸಿರಿ. ಆದರೆ ಕೆಲವೇ ಮಂದಿಯ ಹೊರತು ನೀವೆಲ್ಲರೂ ಆ ಕರಾರಿನಿಂದ ವಿಮುಖರಾದಿರಿ; ಇಂದಿಗೂ ವಿಮುಖರಾಗಿಯೇ ಇದ್ದೀರಿ.'' (ಪವಿತ್ರ ಕುರ್‌ಆನ್,2:83)

''ನೀವೆಲ್ಲರೂ ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ. ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡಬೇಡಿರಿ. ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಸಂಬಂಧಿಕರೊಂದಿಗೂ ಅನಾಥರೊಂದಿಗೂ ನಿರ್ಗತಿಕರೊಂದಿಗೂ ಆಪ್ತರಾದ ನೆರೆ ಹೊರೆಯವರೊಂದಿಗೂ ಅಪರಿಚಿತ ನೆರೆಹೊರೆಯವರೊಂದಿಗೂ ಅನುಚರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಹಂಕಾರ ಹೊಂದಿರುವ ಗರ್ವಿಷ್ಠನನ್ನೂ ಆತ್ಮಸ್ತುತಿಗೈಯುವವನನ್ನೂ ಅಲ್ಲಾಹನು ಮೆಚ್ಚುವುದಿಲ್ಲ.'' (ಪವಿತ್ರ ಕುರ್‌ಆನ್,4:36)

''ಜನರಾಡುವ ಹೆಚ್ಚಿನ ಗುಪ್ತ ಮಾತುಕತೆಗಳಲ್ಲಿ ಯಾವ ಹಿತವೂ ಇರುವುದಿಲ್ಲ, ಯಾರಾದರೂ ರಹಸ್ಯ ದಾನ ಧರ್ಮಗಳ ಬೋಧನೆ ನೀಡಿದರೆ ಅಥವಾ ಯಾವುದಾದರೂ ಸತ್ಕಾರ್ಯಕ್ಕೆ ಅಥವಾ ಜನರೊಳಗೆ ಪರಸ್ಪರ ವ್ಯವಹಾರಗಳನ್ನು ಸರಿಪಡಿಸಲಿಕ್ಕಾಗಿ ಪ್ರೇರೇಪಣೆ ನೀಡಿದರೆ ಇದರಲ್ಲಿ ಹಿತವಿದೆ. ಯಾವನಾದರೂ ಅಲ್ಲಾಹನ ಸಂಪ್ರೀತಿಯ ಪ್ರಾಪ್ತಿಗಾಗಿ ಹೀಗೆ ಮಾಡಿದರೆ ಅವನಿಗೆ ನಾವು ಹಿರಿದಾದ ಪ್ರತಿಫಲ ನೀಡುವೆವು.'' (ಪವಿತ್ರ ಕುರ್‌ಆನ್,4:114)

''ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರ ಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದೊಂದಿಗೆ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ, ಅಲ್ಲಾಹನು ನ್ಯಾಯ ಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ.''[1] (ಪವಿತ್ರ ಕುರ್‌ಆನ್,60:8)

□□□

# 16. ಮಾತಾಪಿತರೊಂದಿಗೆ

''ನಿಮ್ಮ ಪ್ರಭು (ಹೀಗೆ) ವಿಧಿಸಿ ಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು.[1] ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕ ವಾಗಿ ಮಾತನಾಡಿರಿ.'' (ಪವಿತ್ರ ಕುರ್‌ಆನ್,17:23)

''ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆತೋರು' ಎಂದು ಪ್ರಾರ್ಥಿಸಿರಿ.'' (ಪವಿತ್ರ ಕುರ್‌ಆನ್,17:24)

''ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು ನಾವೇ ತಾಕೀತು ಮಾಡಿರುತ್ತೇವೆ. ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದುವು. (ಆದುದರಿಂದಲೇ ನಾವು ಅವನೊಡನೆ) ನನಗೆ ಕೃತಜ್ಞತೆ ಸಲ್ಲಿಸು ಮತ್ತು ನಿನ್ನ ಮಾತಾಪಿತರಿಗೆ ಕೃತಜ್ಞತೆ ಸಲ್ಲಿಸು. ನೀನು ನನ್ನ ಕಡೆಗೇ ಮರಳಬೇಕಾಗಿದೆ (ಎಂದು ಉಪದೇಶಿಸಿದೆವು).''

(ಪವಿತ್ರ ಕುರ್‌ಆನ್,31:14)

''ಆದರೆ, ಅವರು ನಿನಗೆ ತಿಳಿಯದುದನ್ನು ನನ್ನೊಂದಿಗೆ ಸಹಭಾಗಿಯಾಗಿ ಮಾಡಬೇಕೆಂದು ನಿನ್ನ ಮೇಲೆ ಒತ್ತಡ ಹಾಕಿದರೆ ಅವರ ಮಾತನ್ನು ಎಷ್ಟು ಮಾತ್ರಕ್ಕೂ ಕೇಳಬೇಡ. ಈ ಲೋಕದಲ್ಲಿ ಅವರೊಂದಿಗೆ ಸದ್ವರ್ತನೆ ಮಾಡುತ್ತಿರು. ಆದರೆ, ಯಾರು ನನ್ನ ಕಡೆಗೆ ಒಲಿದಿರುವನೋ ಅವನ ಮಾರ್ಗವನ್ನು ಮಾತ್ರ ಅನುಸರಿಸು...''

(ಪವಿತ್ರ ಕುರ್‌ಆನ್,31:15)

## ಟಿಪ್ಪಣಿ:

1. ಇದರ ಅರ್ಥವು ಅಲ್ಲಾಹನ ಹೊರತು ಬೇರೆ ಯಾರ ಆರಾಧನೆಯನ್ನೂ ಪೂಜೆಯನ್ನೂ ಮಾಡಬೇಡಿರಿ ಎಂದಿಷ್ಟೆ ಅಲ್ಲ, ಕೇವಲ ಅವನೊಬ್ಬನ ದಾಸ್ಯ, ಅಧೀನತೆ ಹಾಗೂ ನಿಶ್ಶರ್ತ

ದಾಸ್ಯಾನುಸರಣೆಯನ್ನು ಮಾಡಿರಿ, ಅವನ ಆಜ್ಞೆಗಳನ್ನೇ ಆಜ್ಞೆಗಳೆಂದೂ ಅವನ ಶಾಸನವನ್ನೇ ಶಾಸನವೆಂದೂ ಅವನ ಪರಮಾಧಿಕಾರವೇ ಸರ್ವೋನ್ನತ ಪರಮಾಧಿಕಾರವೆಂದೂ ಒಪ್ಪಿಕೊಳ್ಳಿರಿ ಎಂದಾಗಿದೆ. ಇದೊಂದು ಬರಿಯ ಮತೀಯ ನಂಬಿಕೆ ಮತ್ತು ಕೇವಲ ವೈಯಕ್ತಿಕ ಕರ್ಮ ವಿಧಾನಕ್ಕಾಗಿ ಒಂದು ಮಾರ್ಗದರ್ಶನ ಮಾತ್ರವೇ ಅಲ್ಲ, ಇದು ಒಂದು ಸಂಪೂರ್ಣ ನೈತಿಕ, ನಾಗರಿಕ ಹಾಗೂ ರಾಜಕೀಯ ವ್ಯವಸ್ಥೆಯ ಅಡಿಗಲ್ಲಾಗಿದ್ದು ಇದನ್ನು ಪ್ರವಾದಿವರ್ಯರು(ಸ) ಮದೀನಕ್ಕೆ ತಲುಪಿ ಕಾರ್ಯತಃ ಸಂಸ್ಥಾಪಿಸಿದರು.



# 17. ಅನುಮತಿಯಿಲ್ಲದೇ ಪ್ರವೇಶಿಸಬಾರದು

''ಸತ್ಯವಿಶ್ವಾಸಿಗಳೇ ನಿಮ್ಮ ಮನೆಗಳ ಹೊರತು ಇತರರ ಮನೆಗಳಿಗೆ ಅವರ ಒಪ್ಪಿಗೆ ಪಡೆಯದೆ ಹಾಗೂ ಮನೆಯವರಿಗೆ ಸಲಾಮ್ ಹೇಳದೆ ಪ್ರವೇಶಿಸಬೇಡಿ. ಈ ಕ್ರಮವು ನಿಮ್ಮ ಮಟ್ಟಿಗೆ ಉತ್ತಮ. ನೀವು ಇದನ್ನು ಗಮನದಲ್ಲಿರಿಸುವಿರೆಂದು ನಿರೀಕ್ಷಿಸಲಾಗಿದೆ.[1] ಇನ್ನು ಅಲ್ಲಿ ಯಾರೂ ಕಾಣಸದಿದ್ದರೆ ನಿಮಗೆ ಅನುಮತಿ ಸಿಗುವ ವರೆಗೂ ಅದರೊಳಗೆ ಪ್ರವೇಶಿಸಬೇಡಿರಿ ಮತ್ತು ಮರಳಿ ಹೋಗಿರೆಂದು ನಿಮ್ಮೊಡನೆ ಹೇಳಲಾದರೆ ಮರಳಿ ಬಿಡಿರಿ. ಇದು ನಿಮ್ಮ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮ ಮತ್ತು ನೀವು ಮಾಡುತ್ತಿರುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ತಿಳಿದಿರುತ್ತಾನೆ.'' (ಪವಿತ್ರ ಕುರ್‌ಆನ್,24:27,28)

## ಟಿಪ್ಪಣಿ

1. ಅಜ್ಞಾನ ಕಾಲದಲ್ಲಿ ನಿಸ್ಸಂಕೋಚವಾಗಿ ಇತರರ ಮನೆಗಳಿಗೆ ನುಗ್ಗಿ ಬಿಡುವುದು ಅರಬರಲ್ಲಿ ಒಂದು ಸಂಪ್ರದಾಯವೇ ಆಗಿತ್ತು. ಅಲ್ಲಾಹನು ಇದನ್ನು ಸುಧಾರಿಸಲಿಕ್ಕಾಗಿ, ಪ್ರತಿಯೊಬ್ಬನಿಗೂ ತಾನಿರುವ ಸ್ಥಳದಲ್ಲಿ ಏಕಾಂತತೆಯ (Privacy) ಹಕ್ಕಿದೆ, ಈ ಏಕಾಂತದಲ್ಲಿ ಅವನ ಇಚ್ಛೆ ಮತ್ತು ಅನುಮತಿಯ ವಿನಾ ತೊಡಕುಂಟು ಮಾಡುವುದು ಇತರರಿಗೆ ಧರ್ಮಸಮ್ಮತವಲ್ಲ ಎಂಬ ನಿಯಮವನ್ನು ನಿಶ್ಚಯಿಸಿದನು. ಈ ಆಜ್ಞೆ ಅವತೀರ್ಣಗೊಂಡ ಬಳಿಕ ಪ್ರವಾದಿವರ್ಯರು(ಸ) ಸಮಾಜದಲ್ಲಿ ಜಾರಿಗೊಳಿಸಿದ ನಿಯಮ ಮತ್ತು ಶಿಷ್ಟಾಚಾರಗಳು ಅನುಕ್ರಮವಾಗಿ ಹೀಗಿವೆ.

i. ಪ್ರವಾದಿಯವರು ಏಕಾಂತತೆಯ ಈ ಹಕ್ಕನ್ನು ಮನೆಗಳೊಳಗೆ ಪ್ರವೇಶಿಸುವುದಕ್ಕೆ ಮಾತ್ರ ಸೀಮಿತಗೊಳಿಸಲಿಲ್ಲ, ಅದನ್ನು ಒಂದು ಸಾರ್ವತ್ರಿಕ ಹಕ್ಕೆಂದು ಸಾರಿದರು. ಇದರ ಪ್ರಕಾರ ಇತರರ ಮನೆಯೊಳಗೆ ಇಣುಕಿ ನೋಡುವುದೂ ಹೊರಗಿನಿಂದ ದೃಷ್ಟಿ ಹಾಕುವುದೂ ಹೆಚ್ಚೇಕೆ ಬೇರೆಯವರ ಪತ್ರವನ್ನು ಅವರ ಅನುಮತಿಯಿಲ್ಲದೆ ಓದುವುದು ಕೂಡ ನಿಷಿದ್ಧವಾಗಿದೆ.

ii. ಕರ್ಮಶಾಸ್ತ್ರಜ್ಞರು, ಕಿವಿಗೊಡುವುದನ್ನೂ ನೋಡುವುದಕ್ಕೆ ಸಮಾನವೆಂದಿದ್ದಾರೆ. ಉದಾ: ಒಬ್ಬ ಕುರುಡನು ಅನುಮತಿಯಿಲ್ಲದೆ ಒಳಗೆ ಬಂದರೂ ಅವನು ಏನನ್ನೂ ಕಾಣಲಾರನು. ಆದರೆ ಅವನ ಕಿವಿಗಳು ಮನೆಯವರ ಮಾತುಗಳನ್ನು ಅವರ ಅನುಮತಿಯಿಲ್ಲದೇ ಕೇಳಬಲ್ಲವು. ಇದೂ ದೃಷ್ಟಿಯ ಹಾಗೆಯೇ ಏಕಾಂತತೆಯ ಹಕ್ಕಿನ ಮೇಲೆ ಆಕ್ರಮಣವಾಗುವುದು.

iii. ಅನುಮತಿ ಕೇಳಬೇಕೆಂಬ ಆಜ್ಞೆ ಅನ್ಯರ ಮನೆಗೆ ಹೋಗುವಾಗ ಮಾತ್ರ ಇರುವುದಲ್ಲ, ಸ್ವತಃ ತನ್ನ ತಾಯಿ, ಸಹೋದರಿ ಮೊದಲಾದ ಆಪ್ತರ ಬಳಿಗೆ ಹೋಗುವಾಗಲೂ ಇದೆ.

iv. ಒಬ್ಬರ ಮನೆಗೆ ಹಠಾತ್ತನೆ ಯಾವುದಾದರೂ ವಿಪತ್ತು ಬಂದರೆ, ಅಂತಹ ಸಂದರ್ಭದಲ್ಲಿ ಮಾತ್ರ ಈ ಅನುಮತಿ ಕೇಳಬೇಕೆಂಬ ಆದೇಶ ಅನ್ವಯವಾಗುವುದಿಲ್ಲ. ಉದಾ: ಬೆಂಕಿ ತಾಗಿದಾಗ, ಕಳ್ಳರು ನುಗ್ಗಿದಾಗ, ಇಂತಹ ಸಂದರ್ಭದಲ್ಲಿ ಸಹಾಯ ಮಾಡಲಿಕ್ಕಾಗಿ ಅನುಮತಿಯಿಲ್ಲದೇ ಪ್ರವೇಶಿಸಬಹುದು.

v. ಅನುಮತಿ ಪಡೆಯುವ ಸರಿಯಾದ ಕ್ರಮ ತನ್ನ ಹೆಸರನ್ನು ಹೇಳಿ ಅನುಮತಿ ಪಡೆಯುವುದಾಗಿದೆ. ಅನುಮತಿ ಪಡೆಯಲಿಕ್ಕಾಗಿ ಹೆಚ್ಚೆಂದರೆ ಮೂರು ಸಲ ಕೂಗಿ ಕರೆಯಬಹುದೆಂಬ ಮಿತಿಯನ್ನು ಪ್ರವಾದಿವರ್ಯರು(ಸ) ನಿಶ್ಚಯಿಸಿದರು. ಮೂರನೆಯ ಸಲ ಕೂಗಿದಾಗಲೂ ಉತ್ತರ ಸಿಗದಿದ್ದರೆ ಹಿಂದಿರುಗಿ ಬಿಡಿರಿ ಎಂದಿರುವರು.

vi. ಅನುಮತಿ ಸಿಂಧುವಾಗಬೇಕಿದ್ದರೆ ಒಂದೋ ಸ್ವತಃ ಮನೆಯ ಯಜಮಾನನೇ ಅನುಮತಿ ನೀಡಬೇಕು ಅಥವಾ ಅನುಮತಿ ಕೊಡುತ್ತಿರುವವನು ಮನೆಯ ಯಜಮಾನನ ಪರವಾಗಿಯೇ ಅದನ್ನು ಕೊಡುತ್ತಿದ್ದಾನೆಂದು ನಂಬಲು ಸಮರ್ಪಕ ಕಾರಣಗಳಿರಬೇಕು.

vii. ಅನುಮತಿ ಪಡೆಯಲಿಕ್ಕಾಗಿ ಅನುಚಿತ ಒತ್ತಡ ಹೇರುವುದಾಗಲೀ, ಅನುಮತಿ ಸಿಗದಿರುವಾಗ ಬಾಗಿಲ ಬಳಿಯಲ್ಲಿಯೇ ಹಟತೊಟ್ಟು ನಿಂತಿರುವುದಾಗಲೀ ಸರಿಯಲ್ಲ.



# 18. ಪರದೂಷಣೆ ಮಾಡದಿರಿ

''ಸತ್ಯವಿಶ್ವಾಸಿಗಳೇ, ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿವೆ.[1] ದೋಷಾನ್ವೇಷಣೆ ಮಾಡದಿರಿ.[2] ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ ಪರದೂಷಣೆ ಮಾಡಬಾರದು.[3] ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಮಾಂಸ ತಿನ್ನುವುದನ್ನು ಇಷ್ಟಪಡುವನೇ?[4] ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ. ಅಲ್ಲಾಹನನ್ನು ಭಯಪಡಿರಿ, ಅಲ್ಲಾಹನು ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾಳುವೂ ಆಗಿರುತ್ತಾನೆ.''

(ಪವಿತ್ರ ಕುರ್‌ಆನ್,49:12)

## ಟಿಪ್ಪಣಿ:

1. ಗುಮಾನಿಯಿಂದ ಸಂಪೂರ್ಣವಾಗಿ ತಡೆಯಲಾಗಲಿಲ್ಲ. ಬಹಳ ಹೆಚ್ಚು ಗುಮಾನಿ ಮಾಡುವುದರಿಂದ ಮತ್ತು ಎಲ್ಲ ಬಗೆಯ ಊಹೆಗಳನ್ನೂ ಅನುಸರಿಸುತ್ತಾ ಹೋಗುವುದರಿಂದ ತಡೆಯಲಾಗಿದೆ. ಕೆಲವು ಗುಮಾನಿಗಳು ಪಾಪವಾಗಿರುತ್ತವೆಂಬುದೇ ಇದಕ್ಕೆ ಕಾರಣ ಎಂದೂ ತಿಳಿಸಲಾಗಿದೆ. ಇನ್ನೊಬ್ಬರ ಬಗ್ಗೆ ವೃಥಾ ದುರಭಿಪ್ರಾಯ ತಾಳುವುದು, ಇನ್ನೊಬ್ಬರ ಬಗ್ಗೆ ಅಭಿಪ್ರಾಯ ತಾಳುವಾಗ ಯಾವಾಗಲೂ ದುರಭಿಪ್ರಾಯದಿಂದಲೇ ಪ್ರಾರಂಭ ಮಾಡುವುದು, ಒಬ್ಬ ವ್ಯಕ್ತಿ ಮೇಲ್ನೋಟಕ್ಕೆ ಶಿಷ್ಟ ಹಾಗೂ ಉತ್ತಮನಾಗಿದ್ದರೂ ಅವನ ಬಗ್ಗೆ ದುರಭಿಪ್ರಾಯ ತಾಳುವುದು, ಇವು ನಿಜವಾಗಿ ಪಾಪಕರವಾದ ಗುಮಾನಿಗಳಾಗಿವೆ. ಇದೇ ರೀತಿ ಒಬ್ಬನ ಒಂದು ಮಾತು ಅಥವಾ ಕೃತಿಯು ಒಳ್ಳೆಯದಾಗಿರುವ ಅಥವಾ ಕೆಟ್ಟದಾಗಿರುವ ಸಮಾನ ಸಾಧ್ಯತೆ ಇರುವಾಗ, ನಾವು ಅಪನಂಬಿಕೆ ತೋರಿಸಿ ಅದು ಕೆಟ್ಟದು ಎಂದು ತೀರ್ಮಾನಿಸಿ ಬಿಡುವುದು ಕೂಡಾ ಪಾಪವಾಗಿದೆ. ಉದಾ: ಒಬ್ಬ ವ್ಯಕ್ತಿ ಒಂದು ಸಭೆಯಿಂದ ಹೊರಬಂದು ತನ್ನ ಚಪ್ಪಲಿಯ ಬದಲು ಬೇರೊಬ್ಬನ ಚಪ್ಪಲಿಯನ್ನು ಧರಿಸಿಕೊಂಡು ಹೊರಟರೆ ಅವನು ಚಪ್ಪಲಿ ಕದಿಯುವ ಉದ್ದೇಶದಿಂದಲೇ ಹೀಗೆ ಮಾಡಿದ್ದಾನೆಂದು ಹೇಳುವುದು, ವಾಸ್ತವದಲ್ಲಿ ಇದು ಕೇವಲ ಮರೆವಿನಿಂದ ಸಂಭವಿಸಿರಲೂ ಸಾಧ್ಯವಿದೆ. ಆದರೂ ನಾವು ಒಳ್ಳೆಯ ಸಾಧ್ಯತೆಯನ್ನು ಬಿಟ್ಟು ಕೆಟ್ಟ ಸಾಧ್ಯತೆಯನ್ನೇ ಅಂಗೀಕರಿಸಿಕೊಂಡರೆ ಇದನ್ನು ಕೆಟ್ಟ ಗುಮಾನಿ ಅಥವಾ ದುರಭಿಪ್ರಾಯವೆಂದೇ ಕರೆಯಬೇಕಾಗುವುದು.

2. ಅರ್ಥಾತ್, ಜನರ ರಹಸ್ಯಗಳನ್ನು ಹುಡುಕಬೇಡಿರಿ. ಒಬ್ಬರು ಇನ್ನೊಬ್ಬರ ಹುಳುಕನ್ನು ಹುಡುಕಬಾರದು. ಇತರರ ವ್ಯವಹಾರ ಮತ್ತು ಸ್ಥಿತಿಗಳನ್ನು ಶೋಧಿಸುತ್ತಾ ತಿರುಗಬಾರದು. ಜನರ ಖಾಸಗಿ ಪತ್ರಗಳನ್ನು ಓದುವುದು, ಇಬ್ಬರು ಪರಸ್ಪರ ಮಾತನಾಡುತ್ತಿರುವಾಗ ಅವರ

ಮಾತಿಗೆ ಕಿವಿ ಕೊಡುವುದು, ನೆರೆಯವರ ಮನೆಯೊಳಗೆ ಇಣಕಿ ನೋಡುವುದು, ವಿವಿಧ ವಿಧಾನಗಳಿಂದ ಇತರರ ಗೃಹ ಜೀವನ ಅಥವಾ ಖಾಸಗಿ ವ್ಯವಹಾರಗಳ ಕುರಿತು ತನಿಖೆ ನಡೆಸುವುದು, ಇವೆಲ್ಲವೂ ನಿಷೇಧಿಸಲಾಗಿರುವಂತಹ ದೋಷಾನ್ವೇಷಣೆಯಲ್ಲಿ ಸೇರುತ್ತವೆ. ಯಾರಾದರೂ ಇನ್ನೊಬ್ಬರ ಬಳಿಗೆ ವಿವಾಹ ಪ್ರಸ್ತಾಪವನ್ನು ಕಳುಹಿಸಬಯಸಿದ್ದರೆ ಅಥವಾ ಆತನೊಂದಿಗೆ ಏನಾದರೂ ವ್ಯವಹಾರ ನಡೆಸಬಯಸಿದ್ದರೆ ಅವನು ತನ್ನ ಸಮಾಧಾನಕ್ಕಾಗಿ ಆ ವ್ಯಕ್ತಿಯ ಸ್ಥಿತಿಗತಿಗಳ ಬಗ್ಗೆ ತನಿಖೆ ನಡೆಸಬಹುದು.

3. ಗೀಬತ್ (ಪರನಿಂದೆ, ಹಿಂದಾಡುವುದು) ಎಂದರೆ, ಒಬ್ಬನ ಕುರಿತು ಅವನಿಗೆ ತಿಳಿದರೆ ಬೇಸರವಾಗುವಂತಹ ಮಾತನ್ನು ಅವನ ಅನುಪಸ್ಥಿತಿಯಲ್ಲಿ ಆಡುವುದು. ಈ ವಿಶ್ಲೇಷಣೆಯು ಸ್ವತಃ ಪ್ರವಾದಿಯವರಿಂದಲೇ(ಸ) ಉಲ್ಲೇಖಿತವಿದೆ. ಪ್ರವಾದಿಯವರು(ಸ) ಗೀಬತನ್ನು ಈ ರೀತಿ ವರ್ಣಿಸಿರುವರು, ''ನೀನು ನಿನ್ನ ಸಹೋದರನ ಕುರಿತು ಅವನಿಗೆ ಅಪ್ರಿಯವಾಗುವ ರೀತಿಯಲ್ಲಿ ಪ್ರಸ್ತಾಪಿಸುವುದೇ ಗೀಬತ್ ಆಗಿದೆ.'' ಆಗ ''ಒಂದು ವೇಳೆ ನಾನು ಹೇಳುವಂತಹ ದೋಷ ನಿಜಕ್ಕೂ ಅವನಲ್ಲಿದ್ದರೆ ಅದರ ಕುರಿತು ನಿಮ್ಮ ಅಭಿಪ್ರಾಯವೇನು?'' ಎಂದು ಕೇಳಲಾಯ್ತು. ಅದಕ್ಕೆ ಪ್ರವಾದಿಯವರು ಹೀಗೆ ಉತ್ತರಿಸಿದರು. ''ಆ ದೋಷ ನಿಜವಾಗಿಯೂ ಅವನಲ್ಲಿದ್ದರೆ ನೀನು ಅವನ ಬಗ್ಗೆ ಗೀಬತ್ ಮಾಡಿದೆ. ಒಂದು ವೇಳೆ ಆ ದೋಷ ಅವನಲ್ಲಿ ಇಲ್ಲವೆಂದಾದರೆ ಆಗಂತೂ ನೀನು ಅವನ ಮೇಲೆ ಸುಳ್ಳಾರೋಪ ಹೊರಿಸಿದೆ.''

4. ಈ ವಾಕ್ಯದಲ್ಲಿ ಹಿಂದಾಡುವುದು ಮೃತ ಸಹೋದರನ ಮಾಂಸವನ್ನು ತಿನ್ನುವುದಕ್ಕೆ ಹೋಲಿಸುವ ಮೂಲಕ ಇದು ಅತ್ಯಂತ ಘೋರ ಕೃತ್ಯವೆಂಬ ಭಾವನೆಯನ್ನು ಮೂಡಿಸಲಾಗಿದೆ. ಈ ಉದಾಹರಣೆಯನ್ನು ಪ್ರಶ್ನೆಯ ರೂಪದಲ್ಲಿ ಮುಂದಿಟ್ಟು ತಾನು ತನ್ನ ಸತ್ತ ಸಹೋದರನ ಮಾಂಸವನ್ನು ತಿನ್ನಲು ಸಿದ್ಧನಿರುವೆನೇ ಎಂದು ಪ್ರತಿಯೊಬ್ಬನೂ ತನ್ನ ಅಂತಃಕರಣದೊಳಗೆ ಕೇಳಿ ನಿರ್ಧರಿಸುವಂತೆ ಸೂಚಿಸಲಾಗಿದೆ. ಒಂದು ವೇಳೆ ಇದರ ಉತ್ತರ ಇಲ್ಲ ಎಂದಾದರೆ ಮತ್ತು ಇದನ್ನು ಮಾಡಲು ಅವನ ಪ್ರಕೃತಿ ಹೇಸುತ್ತದೆಂದಾದರೆ ತನ್ನ ಸತ್ಯವಿಶ್ವಾಸಿ ಸಹೋದರನ ಅನುಪಸ್ಥಿತಿಯಲ್ಲಿ ಅವನು ಪ್ರತಿಭಟಿಸಲಾಗದ ಸ್ಥಿತಿಯಲ್ಲಿ ಮತ್ತು ತನ್ನನ್ನು ಅವಮಾನಗೊಳಿಸಲಾಗುತ್ತದೆ ಎಂಬ ವಿಷಯವೂ ಅವನಿಗೆ ತಿಳಿಯದಿರುವ ಸ್ಥಿತಿಯಲ್ಲಿ ಅವನ ಮಾನ ಮರ್ಯಾದೆಯ ಮೇಲೆ ದಾಳಿ ಮಾಡಲು ಇಷ್ಟ ಪಡುವುದಾದರೂ ಹೇಗೆ? ಗೀಬತ್ ನಿಷಿದ್ಧವಾಗಿರುವುದಕ್ಕೆ, ಅದರಿಂದ ಗೀಬತ್(ಪರನಿಂದೆ)ಗೆ ಒಳಗಾಗುವ ವ್ಯಕ್ತಿಗೆ ಮನ ನೋಯುತ್ತದೆ ಎಂಬುದೇ ಮೂಲ ಕಾರಣವಲ್ಲ, ವಾಸ್ತವದಲ್ಲಿ ಗೀಬತ್ ಮಾಡಲ್ಪಡುವ ವ್ಯಕ್ತಿಗೆ ಅದು ತಿಳಿದಿರಲಿ, ಇಲ್ಲದಿರಲಿ, ಅವನಿಗೆ ಅದರಿಂದ ದುಃಖವಾಗಲಿ, ಆಗದಿರಲಿ ಯಾವುದೇ ವ್ಯಕ್ತಿಯ ಅನುಪಸ್ಥಿತಿಯಲ್ಲಿ ಅವನ ದೂಷಣೆ ಮಾಡುವುದು ವಸ್ತುತಃ ನಿಷಿದ್ಧವಾಗಿದೆ.

☐☐☐

# 19. ಮದ್ಯಪಾನ, ಜೂಜು ಮತ್ತು ಜ್ಯೋತಿಷ್ಯ ನಿಷಿದ್ಧ

''ಮದ್ಯಪಾನ ಮತ್ತು ಜೂಜಾಟದ ಬಗ್ಗೆ ಏನು ಆದೇಶವಿದೆಯೆಂದು ಕೇಳುತ್ತಾರೆ. ಹೇಳಿರಿ! ಅವೆರಡರಲ್ಲೂ ಮಹತ್ತರವಾದ ಕೇಡಿದೆ. ಅವುಗಳಲ್ಲಿ ಜನರಿಗೆ ಕೆಲವು ಪ್ರಯೋಜನಗಳು ಇದ್ದರೂ ಅವುಗಳಿಂದಾಗುವ ಹಾನಿಯು ಪ್ರಯೋಜನಗಳಿಗಿಂತ ಬಹಳಷ್ಟು ಹೆಚ್ಚು...[1]''
(ಪವಿತ್ರ ಕುರ್‌ಆನ್,2:219)

''ಓ ಸತ್ಯವಿಶ್ವಾಸಿಗಳೇ, ಮದ್ಯ, ಜೂಜು, 'ಬಲಿ ಪೀಠಗಳು' ಮತ್ತು 'ದಾಳ ಹಾಕುವುದು'[2] ಇವೆಲ್ಲ ಹೊಲಸು ಪೈಶಾಚಿಕ ಕೃತ್ಯಗಳಾಗಿವೆ. ಅವುಗಳನ್ನು ವರ್ಜಿಸಿರಿ, ನಿಮಗೆ ಯಶಸ್ಸು ಲಭಿಸುವುದೆಂದು ನಿರೀಕ್ಷಿಸಬಹುದು.[3]'' (ಪವಿತ್ರ ಕುರ್‌ಆನ್,5:90)

''ಶೈತಾನನು ಮದ್ಯ ಮತ್ತು ಜೂಜಿನ ಮೂಲಕ ನಿಮ್ಮೊಳಗೆ ವೈರತ್ವ ಮತ್ತು ದ್ವೇಷವನ್ನುಂಟು ಮಾಡಲಿಕ್ಕೂ ನಿಮ್ಮನ್ನು ಅಲ್ಲಾಹನ ಸ್ಮರಣೆಯಿಂದಲೂ ನಮಾಝಿನಿಂದಲೂ ತಡೆಯಲಿಕ್ಕೂ ಇಚ್ಛಿಸುತ್ತಾನೆ. ಇನ್ನಾದರೂ ನೀವು ಅವುಗಳನ್ನು ತ್ಯಜಿಸುವಿರಾ?'' (ಪವಿತ್ರ ಕುರ್‌ಆನ್,5:91)

''ಕೆಡುಕಿನ ಪ್ರತಿಫಲ ಅದಕ್ಕೆ ಸಮಾನವಾದ ಕೆಡುಕಾಗಿದೆ. ಇನ್ನು ಯಾರಾದರೂ ಕ್ಷಮಿಸಿಬಿಟ್ಟರೆ ಹಾಗೂ ಸುಧಾರಿಸಿಕೊಂಡರೆ ಅದರ ಪ್ರತಿಫಲದ ಹೊಣೆ ಅಲ್ಲಾಹನ ಮೇಲಿದೆ. ನಿಶ್ಚಯವಾಗಿಯೂ ಅವನು ಅಕ್ರಮಿಗಳನ್ನು ಮೆಚ್ಚುವುದಿಲ್ಲ.'' (ಪವಿತ್ರ ಕುರ್‌ಆನ್,42:40)

## ಟಿಪ್ಪಣಿ

1. ಮದ್ಯಪಾನ ಮತ್ತು ಜೂಜಿನ ಕುರಿತಾಗಿ ಬಂದ ಆರಂಭದ ಆದೇಶವಿದು. ಇದರಲ್ಲಿ ಮುಂದೆ ಅವುಗಳ ನಿಷೇಧವನ್ನು ಒಪ್ಪಿಕೊಳ್ಳಲು ಜನರು ಮಾನಸಿಕವಾಗಿ ಸಿದ್ಧರಾಗಲೆಂದು ಅವುಗಳ ಬಗ್ಗೆ ಅಸಂತುಷ್ಟಿಯನ್ನು ಮಾತ್ರ ಪ್ರಕಟಿಸಿ ಬಿಟ್ಟು ಬಿಡಲಾಗಿದೆ. ಅನಂತರ ಮದ್ಯಪಾನ ಮಾಡಿ ನಮಾಝ್ ಮಾಡುವುದನ್ನು ನಿಷೇಧಿಸಲಾಯ್ತು. ಕ್ರಮೇಣ ಮದ್ಯಪಾನ ಮತ್ತು ಜೂಜಾಟಗಳೂ ಆ ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳೂ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟವು.

2. ಬಲಿಪೀಠಗಳು ಅರ್ಥಾತ್, ಜನರು ದೇವೇತರರಿಗೆ ಹರಕೆ ಕಾಣಿಕೆಗಳನ್ನು ಸಲ್ಲಿಸಲಿಕ್ಕಾಗಿ ಕಾದಿರಿಸಿಕೊಂಡ ಎಲ್ಲ ಸ್ಥಾನಗಳೂ ಇದರ ಅರ್ಥ ವ್ಯಾಪ್ತಿಗೆ ಒಳಪಟ್ಟಿವೆ, ಅಲ್ಲಿ ಕಲ್ಲು, ಮರ, ವಿಗ್ರಹ ಇತ್ಯಾದಿಗಳು ಇರಲಿ ಇಲ್ಲದಿರಲಿ, ಯಾರಾದರೊಬ್ಬ ಪುಣ್ಯ ಪುರುಷ, ದೇವಿ ಅಥವಾ ಇತರ ಬಹುದೇವ ವಿಶ್ವಾಸಕ್ಕೆ ಸಂಬಂಧಿಸಿದ ಸ್ಥಳಕ್ಕೆ ನಮ್ಮಲ್ಲಿ 'ಗುಡಿ' ಎಂಬ

ಪದವನ್ನು ಪ್ರಯೋಗಿಸಲಾಗುತ್ತದೆ. ಇಂತಹ ಯಾವುದೇ ಸ್ಥಾನದಲ್ಲಿ ಕೊಯ್ದ ಪ್ರಾಣಿ ಹರಾಮ್ (ನಿಷಿದ್ಧ) ಆಗಿರುತ್ತದೆ.

ಈ ಸೂಕ್ತದಲ್ಲಿ ಯಾವುದನ್ನು ನಿಷಿದ್ಧಗೊಳಿಸಲಾಗಿದೆಯೋ ಅದರ ಮೂರು ಮುಖ್ಯ ವಿಧಗಳು ಜಗತ್ತಿನಲ್ಲಿ ಕಂಡು ಬರುತ್ತದೆ. ಈ ಸೂಕ್ತದಲ್ಲಿರುವ ಆಜ್ಞೆಯು ಈ ಮೂರು ವಿಧಗಳಿಗೂ ಅನ್ವಯವಾಗುತ್ತದೆ.

i. ಬಹುದೇವ ವಿಶ್ವಾಸಪರ ಭವಿಷ್ಯ ಕಥನ–ಇದರಲ್ಲಿ ಅಗೋಚರ ವಿಷಯಗಳನ್ನು, ಅದೃಷ್ಟ ಫಲಗಳನ್ನು ಅಥವಾ ಪರಸ್ಪರ ವಿವಾದಗಳ ತೀರ್ಮಾನವನ್ನು ಯಾವುದಾದರೊಂದು ದೇವಿ–ದೇವತೆಯೊಡನೆ ಕೇಳಲಾಗುತ್ತದೆ. ಮಕ್ಕಾದ ನಿಷೇಧಿಗಳು ಇದಕ್ಕಾಗಿ 'ಹುಬಲ್' ಎಂಬ ದೇವತೆಯ ವಿಗ್ರಹವನ್ನು ಆರಿಸಿದ್ದರು. ಅದರ ಪೀಠದಲ್ಲಿ ಏಳು ಬಾಣಗಳು ಇರಿಸಲ್ಪಟ್ಟಿದ್ದವು. ಅವುಗಳ ಮೇಲೆ ಬೇರೆ ಬೇರೆ ತರದ ವಾಕ್ಯಗಳು ಕೆತ್ತಲ್ಪಟ್ಟಿದ್ದವು. ಯಾವುದಾದರೊಂದು ಕೆಲಸವನ್ನು ಮಾಡಬಹುದೋ ಮಾಡಬಾರದೋ ಎಂದು ಕೇಳಬೇಕಾಗಿ ಬಂದರೆ ಅಥವಾ ಕಳೆದು ಹೋದ ವಸ್ತುವನ್ನು ಹುಡುಕಬೇಕಾದರೆ ಅಥವಾ ಇಂತಹ ಇತರ ಯಾವುದೇ ಕಾರ್ಯವಿರಲಿ ಅದಕ್ಕೆ 'ಹುಬಲ್'ನ ದಾಳದಾರನ ಬಳಿ ಹೋಗಿ ಅವನಿಗೆ ಸಲ್ಲಿಸಬೇಕಾದ ಕಾಣಿಕೆಗಳನ್ನು ಕೊಟ್ಟು ನಮ್ಮ ಸಮಸ್ಯೆಯನ್ನು ಬಗೆಹರಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತಿದ್ದರು. ಅನಂತರ ದಾಳದಾರನು ಆ ಬಾಣಗಳ ಮೂಲಕ ಪ್ರಶ್ನೆ ಕೇಳುತ್ತಿದ್ದನು. ಇದರಲ್ಲಿ ಯಾವ ಬಾಣ ಬರುತ್ತಿತ್ತೋ ಅದರ ಮೇಲೆ ಬರೆದಿರುವ ಮಾತನ್ನು ಹುಬಲ್‌ನ ತೀರ್ಪೆಂದು ಭಾವಿಸಲಾಗುತ್ತಿತ್ತು.

ii. ಭ್ರಾಮಕ ಭವಿಷ್ಯ ಕಥನ–ರಮಲ್, ಜ್ಯೋತಿಷ್ಯ, ಜಫರ್ ಶಾಸ್ತ್ರಗಳು, ನಾನಾ ತರದ ಶಕುನಗಳು, ನಕ್ಷತ್ರ ಫಲ ಮತ್ತು ಭವಿಷ್ಯ ಕಥನದ ಇನ್ನೂ ಅನೇಕ ರೂಪಗಳು ಇದರಲ್ಲಿ ಸೇರುತ್ತವೆ.

iii. ನ್ಯಾಯವಾದ ಹಕ್ಕು, ಸೇವೆ ಮತ್ತು ವಿವೇಕಪೂರ್ಣ ನಿರ್ಧಾರದ ಆಧಾರದಲ್ಲಿ ವಸ್ತುಗಳ ವಿತರಣೆ ಮಾಡುವುದರ ಬದಲಿಗೆ ಕೇವಲ ಆಕಸ್ಮಿಕ ಸಂಯೋಗದ ಆಧಾರದಲ್ಲಿ ಮಾಡುವುದು– ಉದಾ: ಲಾಟರಿ, ಒಗಟುಗಳು.

3. ಈ ಸೂಕ್ತದಲ್ಲಿ ನಾಲ್ಕು ವಸ್ತುಗಳನ್ನು ಸಂಪೂರ್ಣವಾಗಿ ನಿಷಿದ್ಧ ಎಂದು ಸಾರಲಾಗಿದೆ. ಅವು ಮದ್ಯ, ಜೂಜು, ದೇವೇತರರ ಹೆಸರಲ್ಲಿ ಬಲಿಯರ್ಪಿಸಲು ಹಾಗೂ ಹರಕೆ ಕಾಣಿಕೆಗಳ ರೂಪದಲ್ಲಿ ಸಲ್ಲಿಸಲು ಕಾದಿರಿಸಲ್ಪಟ್ಟ ಸಾಧನಗಳು ಮತ್ತು ದಾಳ ಹಾಕುವುದು. ಕೊನೆಯ ಮೂರು ವಿಷಯಗಳ ವಿವರಣೆ ಮೇಲೆ ಕೊಡಲಾಗಿದೆ. ಇನ್ನು ಮದ್ಯದ ಕುರಿತು ವಿವರಣೆ ಹೀಗಿದೆ, ಮದ್ಯಪಾನ ನಿಷೇಧದ ಕುರಿತ ಆಜ್ಞೆ ಇದಕ್ಕಿಂತ ಮುಂಚಿನ ಅಧ್ಯಾಯ 2:219ನೇ ಸೂಕ್ತ ಮತ್ತು ಅಧ್ಯಾಯ 4:43ನೇ ಸೂಕ್ತದಲ್ಲಿ ಅವತೀರ್ಣವಾಗಿದ್ದವು. ಈ ಕೊನೆಯ ಆಜ್ಞೆ ಬರುವುದಕ್ಕಿಂತ ಮುಂಚೆ ಪ್ರವಾದಿಯವರು(ಸ) ಒಂದು ಉಪನ್ಯಾಸದಲ್ಲಿ ಅಲ್ಲಾಹನಿಗೆ ಮದ್ಯವು ಅತ್ಯಂತ ಅಪ್ರಿಯವಾಗಿದೆಯೆಂದೂ ಅದನ್ನು ಸಂಪೂರ್ಣ ನಿಷಿದ್ಧಗೊಳಿಸುವ ಆಜ್ಞೆ ಬಂದುಬಿಡಲೂ

ಬಹುದು ಎಂದೂ ಯಾರಲ್ಲೆಲ್ಲ ಮದ್ಯದ ಸಂಗ್ರಹವಿದೆಯೋ ಅವರು ಕೂಡಲೇ ಅದನ್ನು ಮಾರಿಬಿಡಬೇಕೆಂದೂ ಹೇಳಿದ್ದರು. ಈ ಆಜ್ಞೆ ಬಂದ ಬಳಿಕ ಇನ್ನು ಯಾರಲ್ಲಾದರೂ ಮದ್ಯವಿದ್ದರೆ ಅದನ್ನು ಕುಡಿಯಬಾರದು, ಮಾರಬಾರದು ಅದನ್ನು ಚೆಲ್ಲಿಬಿಡಬೇಕು ಎಂದರು. ಆ ಪ್ರಕಾರ ಆಗಲೇ ಮದೀನದ ಚರಂಡಿಗಳಲ್ಲಿ ಮದ್ಯವನ್ನು ಚೆಲ್ಲಿಬಿಡಲಾಯ್ತು.

ಅಲ್ಲಾಹನು ಮದ್ಯವನ್ನು, ಅದನ್ನು ಕುಡಿಯುವವನನ್ನು, ಕುಡಿಸುವವನನ್ನು, ಮಾರುವವನನ್ನು, ಖರೀದಿಸುವವನನ್ನು ಅದರ ಭಟ್ಟಿ ಇಳಿಸುವವನನ್ನು, ಭಟ್ಟಿ ಇಳಿಸುವ ಕಾರ್ಯವನ್ನು ಮಾಡಿಸುವವನನ್ನು, ಹೊತ್ತು ಕೊಂಡೊಯ್ಯುವವನನ್ನು ಯಾರಿಗಾಗಿ ಅದನ್ನು ಒಯ್ಯಲಾಗುತ್ತಿದೆಯೋ ಅವನನ್ನು ಶಪಿಸಿರುತ್ತಾನೆಂದು ಪ್ರವಾದಿಯವರು(ಸ) ಹೇಳಿರುತ್ತಾರೆಂದು ಹ. ಇಬ್ನ್ ಉಮರ್ ವರದಿ ಮಾಡಿದ್ದಾರೆ. ಮದ್ಯಪಾನವಿರುವ ಭೋಜನ ಕೂಟದಲ್ಲಿ ಸೇರಿ ಊಟ ಮಾಡುವುದನ್ನು ಪ್ರವಾದಿಯವರು(ಸ) ನಿಷೇಧಿಸಿದ್ದಾರೆಂದು ಇನ್ನೊಂದು ಪ್ರವಾದಿ ವಚನದಲ್ಲಿದೆ. ಅರಬೀ ಭಾಷೆಯಲ್ಲಿ 'ಖಮ್ರ್' ಎಂಬ ಪದವು ದ್ರಾಕ್ಷೆಯಿಂದ ತಯಾರಿಸಲ್ಪಡುವ ಮದ್ಯಕ್ಕೆ ಪ್ರಯೋಗವಾಗುತ್ತಿತ್ತು. ಆದರೆ ಪ್ರವಾದಿಯವರು(ಸ) ಅಮಲನ್ನುಂಟು ಮಾಡುವ ಸರ್ವ ವಸ್ತುಗಳಿಗೂ ನಿಷೇಧಾಜ್ಞೆಯನ್ನು ಸಾರ್ವತ್ರಿಕವಾಗಿ ಅನ್ವಯಗೊಳಿಸಿದರು. ಪ್ರತಿಯೊಂದು ಅಮಲು ಪದಾರ್ಥವು ಖಮ್ರ್ ಆಗಿದೆ ಮತ್ತು ಪ್ರತಿಯೊಂದು ಅಮಲು ಪದಾರ್ಥವು ಹರಾಮ್ (ನಿಷಿದ್ಧ)ಆಗಿದೆ. ''ಅಮಲು ಉಂಟು ಮಾಡುವ ಪ್ರತಿಯೊಂದು ಪಾನೀಯ ಹರಾಮ್ ಆಗಿದೆ''. ಖಮ್ರ್ ಎಂದರೆ ಬುದ್ಧಿಭ್ರಂಶಗೊಳಿಸುವ ಸಕಲ ವಸ್ತುಗಳು ಎಂದು ಹ. ಉಮರ್‌ರವರು(ರ) ಹೇಳಿದ್ದರು. ಯಾವುದಾದರೊಂದು ವಸ್ತುವಿನ ಅಧಿಕ ಪ್ರಮಾಣವು ಅಮಲುಂಟು ಮಾಡುವುದಾದರೆ ಆದರ ಅತ್ಯಲ್ಪ ಪ್ರಮಾಣದ ಸೇವನೆಯೂ ಹರಾಮ್ ಆಗಿದೆ. ಉದಾ: ಅಮಲುಂಟು ಮಾಡಬೇಕೆಂಬ ಉದ್ದೇಶದಿಂದ ಔಷಧಿಯನ್ನು ಅಧಿಕ ಪ್ರಮಾಣದಲ್ಲಿ ಕುಡಿಯುವುದಾದರೆ ಅದು ಹರಾಮ್ ಆಗಿದೆ. ಧರ್ಮಶಾಸ್ತ್ರಕ್ಕನುಸಾರ ಮದ್ಯಪಾನ ನಿಷೇಧದ ಈ ಆಜ್ಞೆಯನ್ನು ಕಟ್ಟುನಿಟ್ಟಾಗಿ ಜ್ಯಾರಿಗೊಳಿಸಬೇಕಾದುದು ಇಸ್ಲಾಮೀ ರಾಷ್ಟ್ರದ ಕರ್ತವ್ಯಗಳಲ್ಲೊಂದು. ಹ. ಉಮರ್‌ರವರ(ರ) ಕಾಲದಲ್ಲಿ ಸಕೀಫ್ ಗೋತ್ರದ ರುವೈಶಿದ್ ಎಂಬವನು ರಹಸ್ಯವಾಗಿ ಮದ್ಯ ಮಾರಾಟ ಮಾಡುತ್ತಿದ್ದನೆಂಬ ಅಪರಾಧಕ್ಕಾಗಿ ಅವನ ಅಂಗಡಿಯನ್ನು ಸುಟ್ಟು ಹಾಕಲಾಯ್ತು. ಒಂದು ಸಂದರ್ಭದಲ್ಲಿ ಒಂದು ಗ್ರಾಮದಲ್ಲಿ ಶರಾಬಿನ ರಹಸ್ಯ ಭಟ್ಟಿ ಇಳಿಸಿ ಮಾರಲಾಗುತ್ತಿತ್ತೆಂಬ ಅಪರಾಧಕ್ಕಾಗಿ ಇಡೀ ಗ್ರಾಮವನ್ನೇ ಹ. ಉಮರ್‌ರ ಅಪ್ಪಣೆ ಪ್ರಕಾರ ಸುಟ್ಟು ಹಾಕಲಾಯ್ತು. ಹೆಚ್ಚುತ್ತಿರುವ ಅನೈತಿಕ ಚಟುವಟಿಕೆಗಳು, ಅತ್ಯಾಚಾರಗಳು, ಮಾನಭಂಗ, ಅಪಘಾತಗಳಂತಹ ಅಪರಾಧಗಳಿಗೆ ಮುಖ್ಯ ಕಾರಣ ಎಗ್ಗಿಲ್ಲದ ಮದ್ಯಸೇವನೆ ಎಂಬ ವಿಚಾರ ಕೂಡ ಇಲ್ಲಿ ಪ್ರಸಕ್ತವಾಗಿದೆ.

□□□

# 20. ಲಂಚವು ನಿಷಿದ್ಧವಾಗಿದೆ

''ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು.''

(ಪವಿತ್ರ ಕುರ್‌ಆನ್,2:188)

## ಟಿಪ್ಪಣಿ:

ಇಲ್ಲಿ ಅಧಿಕಾರಿಗಳಿಗೆ ಲಂಚಕೊಟ್ಟು ದುರ್ಲಾಭ ಪಡೆಯಲು ಪ್ರಯತ್ನಿಸಬೇಡಿರಿ ಎಂಬುದು ಒಂದರ್ಥ. ಒಂದು ಸಂಪತ್ತಿನ ಬಗ್ಗೆ, ಅದು ಬೇರೆಯವನದ್ದೆಂದು ನೀವು ತಿಳಿದಿದ್ದೂ ಆತನ ಬಳಿ ಅದರ ದಾಖಲೆ ಪತ್ರಗಳೇನೂ ಇಲ್ಲವೆಂಬ ಕಾರಣದಿಂದ ಅಥವಾ ಹೇಗಾದರೂ ಮಾಡಿ ನೀವು ಅದನ್ನು ಕಬಳಿಸಿಕೊಳ್ಳಬಲ್ಲಿರೆಂದು ತಿಳಿದುಕೊಂಡು ಅದರ ವ್ಯಾಜ್ಯವನ್ನು ನ್ಯಾಯಾಲಯಕ್ಕೆ ಒಯ್ಯಬೇಡಿರಿ. ನ್ಯಾಯಾಧೀಶರು ನ್ಯಾಯಾಲಯಕ್ಕೆ ಒದಗಿಸಲಾದ ವರದಿ ಹಾಗೂ ದಾಖಲೆ ಪತ್ರಗಳ ಆಧಾರದಿಂದ ಆ ಸೊತ್ತನ್ನು ನಿಮಗೆ ಕೊಡಿಸಿ ಬಿಡಲೂಬಹುದು. ಆದರೆ ನ್ಯಾಯಾಲಯದ ತೀರ್ಪಿಗನುಸಾರವಾಗಿ ನೀವು ಆ ಸೊತ್ತಿನ ಒಡೆತನದ ಹಕ್ಕನ್ನು ಪಡೆದರೂ ನೀವು ಅದರ ನಿಜವಾದ ಒಡೆಯರಾಗಲು ಸಾಧ್ಯವಿಲ್ಲ. ಪ್ರವಾದಿಯವರು(ಸ) ಹೀಗೆ ನುಡಿದಿರುವರು– ನಾನು ಎಷ್ಟೆಂದರೂ ಒಬ್ಬ ಮನುಷ್ಯನಾಗಿರುತ್ತೇನೆ. ನೀವು ನನ್ನ ಬಳಿಗೆ ಒಂದು ವ್ಯಾಜ್ಯವನ್ನು ತಂದಾಗ ನಿಮ್ಮ ಪೈಕಿಯೊಬ್ಬನು ಮಾತಿನ ಮಲ್ಲನಾಗಿದ್ದು ಅವನು ಮಂಡಿಸುವ ಆಧಾರ ಪ್ರಮಾಣಗಳನ್ನು ಕೇಳಿ ನಾನು ಅವನಿಗೆ ಅನುಕೂಲವಾಗಿ ತೀರ್ಪು ನೀಡಲೂಬಹುದು. ನೀವು ಈ ರೀತಿಯಲ್ಲಿ ನನ್ನ ತೀರ್ಪಿನ ಪ್ರಕಾರ ನಿಮ್ಮ ಸಹೋದರನೊಬ್ಬನ ಯಾವುದಾದರೊಂದು ವಸ್ತುವನ್ನು ಗಿಟ್ಟಿಸಿಕೊಂಡಿರಾದರೆ ನೀವು ಸಹಜವಾಗಿಯೂ ನರಕದ ಒಂದು ಭಾಗವನ್ನು ಪಡೆದುಕೊಂಡಿದ್ದೀರೆಂದೇ ತಿಳಿದುಕೊಳ್ಳಿರಿ.

□□□

# 21. ಬಡವರಿಗೆ ಸಹಾಯ ಹಸ್ತ ನೀಡಿರಿ

''ಅಲ್ಲಾಹನ ಮಾರ್ಗದಲ್ಲಿ ಕಾರ್ಯವೆಸಗುವ ಭರದಲ್ಲಿ ತಮ್ಮ ಸ್ವಂತ ಜೀವನೋಪಾಯಕ್ಕಾಗಿ ಭೂಮಿಯಲ್ಲಿ ಶ್ರಮ ಪಡಲು ಸಾಧ್ಯವಾಗದಿರುವ ಬಡಜನರು ಮುಖ್ಯವಾಗಿ ಸಹಾಯಕ್ಕೆ ಅರ್ಹರಾಗಿದ್ದಾರೆ. ಅರಿವಿಲ್ಲದವನು ಅವರ ಸ್ವಾಭಿಮಾನವನ್ನು ಕಂಡು ಅವರು ಸ್ಥಿತಿವಂತರಾಗಿದ್ದಾರೆಂದೇ ಊಹಿಸುತ್ತಾನೆ. ನೀವು ಅವರ ಮುಖಭಾವಗಳಿಂದ ಅವರ ಆಂತರಿಕ ಸ್ಥಿತಿಯನ್ನು ತಿಳಿದುಕೊಳ್ಳಬಲ್ಲಿರಿ. ಆದರೆ, ಅವರು ಜನರ ಬೆಂಬತ್ತಿ ಬೇಡುವವರಲ್ಲ, ಅವರ ಸಹಾಯಾರ್ಥವಾಗಿ ನೀವು ಖರ್ಚು ಮಾಡುವ ಸಂಪತ್ತು ಅಲ್ಲಾಹನಿಂದ ಮರೆಯಾಗಿರದು.'' (ಪವಿತ್ರ ಕುರ್‌ಆನ್,2:273)

''ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವನನ್ನು? ಅವನೇ ತಾನೆ, ಅನಾಥನನ್ನು ದೂರ ದಬ್ಬುವವನು[1] ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು![2] ಮತ್ತು ವಿನಾಶ ಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ. ಅವರು ತಮ್ಮ ನಮಾಝಿನ ಬಗ್ಗೆ ಅನಾಸ್ಥೆ ತೋರುತ್ತಾರೆ[3], ಅವರು ತೋರಿಕೆಯ ಕೆಲಸ ಮಾಡುತ್ತಾರೆ ಮತ್ತು (ಜನರಿಗೆ) ಸಾಮಾನ್ಯ ಅವಶ್ಯಕ ವಸ್ತುಗಳನ್ನು ಕೊಡುವುದಕ್ಕೂ ಹಿಂಜರಿಯುತ್ತಾರೆ.''

(ಪವಿತ್ರ ಕುರ್‌ಆನ್,107)

''ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು ಧರ್ಮಶೀಲತೆಯಲ್ಲ.[4] ನಿಜವಾಗಿ ಒಬ್ಬನು ಅಲ್ಲಾಹನನ್ನೂ ನಿರ್ಣಾಯಕ ದಿನವನ್ನೂ ದೇವಚರರನ್ನೂ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದೂ ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ ಅನಾಥರಿಗೂ ನಿರ್ಗತಿಕರಿಗೂ ಪ್ರಯಾಣಿಕರಿಗೂ ಸಹಾಯಾರ್ಥಿಗಳಿಗೂ ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದೂ ನಮಾಝನ್ನು ಸಂಸ್ಥಾಪಿಸುವುದೂ ಝಕಾತನ್ನು (ಕಡ್ಡಾಯ ದಾನವನ್ನು) ನೀಡುವುದೂ ವಾಗ್ದಾನ ಮಾಡಿದರೆ ಪೂರೈಸುವುದೂ ಕಷ್ಟ ಕಾರ್ಪಣ್ಯಗಳಲ್ಲಿಯೂ ಸತ್ಯಾಸತ್ಯಗಳ ಸಮರವಾಗುತ್ತಿರುವಾಗಲೂ ಸಹನೆಯಿಂದಿರುವುದೂ ಧರ್ಮಶೀಲತೆಯಾಗಿರುತ್ತದೆ. ಇವರೇ ಸತ್ಯಸಂಧರು ಮತ್ತು ಇವರೇ ಧರ್ಮನಿಷ್ಠರು.''

(ಪವಿತ್ರ ಕುರ್‌ಆನ್,2:177)

''ಸ್ವರ್ಗದಲ್ಲಿರುವವರು ಅಪರಾಧಿಗಳೊಡನೆ ಹೀಗೆ ಕೇಳುವರು 'ನಿಮ್ಮನ್ನು ನರಕಕ್ಕೆ ಒಯ್ದುದು ಯಾವುದು?'[5] ಅವರು ಹೇಳುವರು; 'ನಾವು ನಮಾಝ್ ಮಾಡುವವರಾಗಿರಲಿಲ್ಲ

ಮತ್ತು ದರಿದ್ರರಿಗೆ ಉಣಿಸುತ್ತಿರಲಿಲ್ಲ[7] ಮತ್ತು ಸತ್ಯದ ವಿರುದ್ಧ ಮಾತುಗಳನ್ನು ಸೃಷ್ಟಿಸುವವರ ಜೊತೆ ಸೇರಿ ನಾವೂ ಮಾತುಗಳನ್ನು ಸೃಷ್ಟಿಸುತ್ತಿದ್ದೆವು''

(ಪವಿತ್ರ ಕುರ್‌ಆನ್,74:40-45)

''ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ.[8] ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು.[9]''

(ಪವಿತ್ರ ಕುರ್‌ಆನ್,90:11-16)

''ಖಂಡಿತ ಅಲ್ಲ! ವಾಸ್ತವದಲ್ಲಿ ನೀವು ಅನಾಥರನ್ನು ಗೌರವದಿಂದ ಕಾಣುವುದಿಲ್ಲ ಬಡವನಿಗೆ ಉಣಬಡಿಸುವಂತೆ ಪರಸ್ಪರರನ್ನು ಪ್ರೇರೇಪಿಸುವುದಿಲ್ಲ[11] ವಾರೀಸು ಸೊತ್ತನ್ನೆಲ್ಲ ಕಬಳಿಸಿ ಬಿಡುತ್ತೀರಿ ಮತ್ತು ಸಂಪತ್ತನ್ನು ಅತಿಯಾಗಿ ಪ್ರೀತಿಸುತ್ತೀರಿ.[12] (ಪವಿತ್ರ ಕುರ್‌ಆನ್,89:17-20)

## ಟಿಪ್ಪಣಿ:

1. ಇಲ್ಲಿ ಅನಾಥನನ್ನು ದೂರ ದಬ್ಬುವವನು ಎಂಬ ಪದ ಪ್ರಯೋಗವಾಗಿದೆ. ಇದಕ್ಕೆ ಅನೇಕ ಅರ್ಥಗಳಿವೆ. ಇದರ ಒಂದು ಅರ್ಥ ಅನಾಥನ ಹಕ್ಕನ್ನು ಕಬಳಿಸುವುದು. ಅವನ ತಂದೆಯು ಬಿಟ್ಟು ಹೋದ ವಾರೀಸು ಸೊತ್ತನ್ನು ಅವನಿಗೆ ಕೊಡದೇ ಹೊರದಬ್ಬುತ್ತಾನೆ ಎಂದಾಗಿದೆ. ಎರಡನೆಯ ಅರ್ಥ ಅನಾಥನು ಅವನೊಡನೆ ಸಹಾಯ ಯಾಚಿಸಲಿಕ್ಕಾಗಿ ಬಂದಾಗ ಅವನ ಮೇಲೆ ಕನಿಕರ ಪಡುವುದರ ಬದಲಿಗೆ ಅವನನ್ನು ಗದರಿಸಿ ಹೊರದಬ್ಬಿ ಬಿಡುತ್ತಾನೆ ಎಂದಾಗಿದೆ. ಮೂರನೆಯ ಅರ್ಥ, ಅವನು ಅನಾಥನ ಮೇಲೆ ಅಕ್ರಮವೆಸಗುತ್ತಾನೆ, ಮಾತು ಮಾತಿಗೆ ಗದರಿಸುತ್ತಾನೆ ಮತ್ತು ಒದ್ದು ದೂರ ಕಳುಹಿಸುತ್ತಾನೆ ಎಂದಾಗಿದೆ.

2. ಇಲ್ಲಿ ತಅಮಿಲ್ ಮಿಸ್ಕೀನ್ ಎಂದು ಹೇಳಲಾಗಿದೆ. ಅರ್ಥಾತ್, ಅವನು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸುವುದಿಲ್ಲ, ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ದರಿದ್ರನಿಗೆ ಕೊಡುವ ಊಟವು ವಾಸ್ತವದಲ್ಲಿ ಅದನ್ನು ಕೊಡುವವನ ಊಟವಲ್ಲ, ಅದು ಸ್ವತಃ ಆ ದರಿದ್ರನದ್ದೇ ಊಟವಾಗಿದೆ. ಅದನ್ನು ಪಡೆಯುವುದು ಅವನ ಹಕ್ಕಾಗಿದ್ದು ಅದನ್ನು ಕೊಡುವುದು ಕೊಡುವವನ ಬಾಧ್ಯತೆಯಾಗಿದೆ. ದರಿದ್ರನಿಗೆ ಊಟ ಕೊಡುವಂತೆ ಸ್ವತಃ ತನ್ನ ಆತ್ಮವನ್ನು ಸನ್ನದ್ಧಗೊಳಿಸುವುದಿಲ್ಲ, ದರಿದ್ರರಿಗೆ ಊಟ ಕೊಡಿರೆಂದು ತನ್ನ ಮನೆಯವರಿಗೂ ಹೇಳುವುದಿಲ್ಲ ಮತ್ತು ಇತರರನ್ನು ಇದಕ್ಕಾಗಿ ಪ್ರೇರೇಪಿಸುವುದೂ ಇಲ್ಲ.

3. ಇಲ್ಲಿ 'ಅನ್ ಸ್ವಲಾತಿಹಿಮ್ ಸಾಹೂನ್' ಅರ್ಥಾತ್ ಅವರು ತಮ್ಮ ನಮಾಝಿನ ಬಗ್ಗೆ ಬೋಧರಹಿತರಾಗಿದ್ದಾರೆ ಎಂದಾಗಿದೆ. ಅಂದರೆ ಅವರ ದೃಷ್ಟಿಯಲ್ಲಿ ನಮಾಝ್ ಮಾಡಿದರೂ ಮಾಡದಿದ್ದರೂ ಒಂದೇ. ಅವರು ಅದಕ್ಕೆ ಯಾವ ಮಹತ್ವವನ್ನೂ ಕೊಡುವುದಿಲ್ಲ, ಎಂದಾದರೂ ನಮಾಝ್ ಮಾಡುವುದಿದ್ದರೆ ಅದರ ಸಮಯವನ್ನು ಮುಂದೂಡುತ್ತಾ ಇರುತ್ತಾರೆ. ಕೊನೆಗೆ

ಆದರ ಸಮಯ ಮುಗಿದೇ ಹೋಗುತ್ತದೆ ಎನ್ನುವಾಗ ಎದ್ದು ನಾಲ್ಕು ಸಲ ಅಡ್ಡ ಬೀಳುತ್ತಾರೆ ಅಥವಾ ನಮಾಝಿಗೆ ಏಳುವಾಗ ತಮ್ಮ ಮೇಲೆ ಯಾವುದೋ ಆಪತ್ತು ಬೀಳುತ್ತಿದೆಯೆಂಬಂತೆ ತೀರಾ ನಿರುತ್ಸಾಹದಿಂದ ಏಳುತ್ತಾರೆ ಮತ್ತು ಒಲ್ಲದ ಮನಸ್ಸಿನಿಂದ ನಮಾಝ್ ನಿರ್ವಹಿಸುತ್ತಾರೆ. ನಮಾಝಿನಲ್ಲಿ ತಮ್ಮ ವಸ್ತ್ರಗಳೊಂದಿಗೆ ಆಟವಾಡುತ್ತಾ, ಆಕಳಿಸುತ್ತಾ ಇರುತ್ತಾರೆ. ದೇವಸ್ಮರಣೆಯ ಯಾವ ಲಕ್ಷಣಗಳೂ ಅವರಲ್ಲಿರುವುದಿಲ್ಲ, ಇವೇ ಪರಲೋಕದ ಮೇಲೆ ವಿಶ್ವಾಸವಿಲ್ಲದಿರುವುದರ ಕುರುಹುಗಳಾಗಿವೆ. ತಾವು ಮುಸ್ಲಿಮರೆಂದು ಹೇಳಿಕೊಳ್ಳುವವರು ಇಂತಹ ಸ್ಥಿತಿಗೆ ಒಳಗಾಗಲು ಕಾರಣವೇನೆಂದರೆ ನಿಜವಾಗಿ ಅವರಿಗೆ ತಾವು ನಮಾಝ್ ನಿರ್ವಹಿಸಿದರೆ ಏನಾದರೂ ಪುಣ್ಯಫಲ ಸಿಗುವುದೆಂಬ ವಿಶ್ವಾಸವಾಗಲೀ ನಿರ್ವಹಿಸದಿದ್ದರೆ ಏನಾದರೂ ಶಿಕ್ಷೆ ಸಿಗಬಹುದೆಂಬ ನಂಬಿಕೆಯಾಗಲೀ ಇರುವುದಿಲ್ಲ. ಪವಿತ್ರ ಕುರ್‌ಆನಿನಲ್ಲಿ ಕಪಟವಿಶ್ವಾಸಿಗಳ ಈ ಸ್ಥಿತಿಯನ್ನು ಇನ್ನೊಂದು ಕಡೆಯಲ್ಲಿ ಈ ರೀತಿ ಹೇಳಲಾಗಿದೆ. ''ಅವರು ನಮಾಝಿಗೆ ಆಲಸ್ಯದಿಂದ ಬರುತ್ತಾರೆ, ದೇವಮಾರ್ಗದಲ್ಲಿ ಒಲ್ಲದ ಮನಸ್ಸಿನಿಂದ ಖರ್ಚು ಮಾಡುತ್ತಾರೆ'' (ಅತ್ತೌಬ: 54) ಇಲ್ಲಿ ತಿಳಿದಿರಬೇಕಾದ ಅಂಶವೇನೆಂದರೆ ನಮಾಝಿನಲ್ಲಿ ಬೇರೆ ಯೋಚನೆಗಳು ಬಂದು ಬಿಡುವ ವಿಷಯ ಮತ್ತು ನಮಾಝಿನ ಕಡೆಗೆ ಗಮನವನ್ನೇ ಕೊಡದಿರುವ ವಿಷಯ ಬೇರೆ ಬೇರೆಯಾಗಿದೆ. ಮೊದಲನೆಯದು ಮಾನವನ ಸ್ವಾಭಾವಿಕ ದೌರ್ಬಲ್ಯವಾಗಿದೆ. ಉದ್ದೇಶರಹಿತವಾಗಿಯೂ ಬೇರೆ ವಿಚಾರಗಳು ಬಂದೇ ಬಿಡುವುದು. ತನ್ನ ಗಮನವು ತಪ್ಪಿಹೋಗಿದೆಯೆಂಬ ಬೋಧವು ಒಬ್ಬ ಸತ್ಯವಿಶ್ವಾಸಿಗೆ ಉಂಟಾದ ತಕ್ಷಣ ಅವನು ಪುನಃ ಪ್ರಯತ್ನಿಸಿ ತನ್ನ ಗಮನವನ್ನು ನಮಾಝಿಗೆ ಕೇಂದ್ರೀಕರಿಸುತ್ತಾನೆ. ಎರಡನೆಯ ಸ್ಥಿತಿಯು ನಮಾಝನ್ನು ನಿರ್ಲಕ್ಷಿಸುವುದೆಂಬ ವ್ಯಾಪ್ತಿಗೆ ಬರುತ್ತದೆ. ಏಕೆಂದರೆ ಇದರಲ್ಲಿ ಮಾನವನು ನಮಾಝ್ ಎಂಬ ವ್ಯಾಯಾಮವನ್ನೇನೋ ಮಾಡಿಕೊಳ್ಳುತ್ತಾನೆ, ಆದರೆ ದೇವನನ್ನು ಸ್ಮರಿಸುವ ಆಲೋಚನೆಯೇ ಅವನಲ್ಲಿರುವುದಿಲ್ಲ.

4. ಇಲ್ಲಿ ಪೂರ್ವ ಅಥವಾ ಪಶ್ಚಿಮ ದಿಕ್ಕುಗಳಿಗೆ ಮುಖ ಮಾಡುವ ಮಾತನ್ನು ಕೇವಲ ಉಪಮೆಯಾಗಿ ಹೇಳಲಾಗಿದೆಯಷ್ಟೆ. ಅಂದರೆ ಧರ್ಮದ ಕೆಲವು ಬಾಹ್ಯಾಚಾರಗಳ ಪಾಲನೆ (ನಮಗೆ ಅನುಕೂಲವಾಗುವಂತಹ) ಕೆಲವು ಸಾಂಪ್ರದಾಯಿಕ ವ್ರತಗಳ ಅನುಷ್ಠಾನ ಮತ್ತು ಧರ್ಮನಿಷ್ಠೆಯ ಕೆಲವು ನಿಶ್ಚಿತ ಹಾಗೂ ಪರಿಚಿತ ರೂಪಗಳ ಪ್ರದರ್ಶನ ಇವೆಲ್ಲಾ ಅಲ್ಲಾಹನ ಬಳಿ ಮಾನ್ಯವಾಗತಕ್ಕ ನಿಜವಾದ ಒಳಿತುಗಳಲ್ಲವೆಂಬುದನ್ನು ತಿಳಿಯಪಡಿಸುವುದೇ ಇದರ ಉದ್ದೇಶ.

5. ಅರ್ಥಾತ್, ಸ್ವರ್ಗದಲ್ಲಿ ತಾವು ಕುಳಿತಿರುವಲ್ಲಿಂದಲೇ ನರಕವಾಸಿಗಳೊಡನೆ ಮಾತನಾಡುವರು ಮತ್ತು ಈ ಪ್ರಶ್ನೆಯನ್ನು ಕೇಳುವರು. ಸ್ವರ್ಗದವರೂ, ನರಕದವರೂ ಪರಸ್ಪರರಿಂದ ಸಹಸ್ರಾರು ಅಥವಾ ಲಕ್ಷಾವಧಿ ಮೈಲು ದೂರವಿರುವರಾದರೂ ಅವರು ಇಷ್ಟ ಬಂದಾಗ ಯಾವುದೇ ಉಪಕರಣದ ಸಹಾಯವಿಲ್ಲದೆ ಪರಸ್ಪರರನ್ನು ನೋಡುವರು ಮತ್ತು ನೇರವಾಗಿ ಸಂಭಾಷಣೆ ನಡೆಸುವರೆಂದು ಕುರ್‌ಆನಿನ ಅನೇಕ ಕಡೆಗಳಲ್ಲಿ ಹೇಳಲಾಗಿದೆ.

6. ಒಬ್ಬ ವ್ಯಕ್ತಿ ಸತ್ಯವಿಶ್ವಾಸ ಸ್ವೀಕಾರ ಮಾಡುವ ತನಕ ನಮಾಝ್ ಮಾಡಲಾರನೆಂಬುದು ಖಂಡಿತ. ಆದುದರಿಂದ ಒಬ್ಬ ವ್ಯಕ್ತಿ ನಮಾಝ್ ನಿರ್ವಹಿಸುವವರಲ್ಲೊಬ್ಬನಾಗಿದ್ದಾನೆ ಎಂದರೆ ಅವನು ಸತ್ಯವಿಶ್ವಾಸಿಗಳಲ್ಲೊಬ್ಬನಾಗಿದ್ದಾನೆ ಎಂದರ್ಥ. ಆದರೆ ಒಬ್ಬ ವ್ಯಕ್ತಿ ಸತ್ಯವಿಶ್ವಾಸಿಯಾಗಿದ್ದರೂ ಅವನು ನಮಾಝ್ ನಿರ್ವಹಿಸದಿದ್ದರೆ ನರಕದಿಂದ ರಕ್ಷಿಸಲ್ಪಡಲಾರ ಎಂದರ್ಥ.

7. ಇದರಿಂದ ತಿಳಿಯುವುದೇನೆಂದರೆ ಒಬ್ಬ ಮನುಷ್ಯ ಹಸಿದಿರುವುದನ್ನು ಕಂಡು ತನಗೆ ಸಾಧ್ಯವಿದ್ದೂ ಅವನಿಗೆ ಉಣಬಡಿಸದಿರುವುದು ಇಸ್ಲಾಮಿನ ಬಹುದೊಡ್ಡ ಪಾಪವಾಗಿದ್ದು ಅದು ಒಬ್ಬ ವ್ಯಕ್ತಿಯನ್ನು ನರಕವಾಸಿಯಾಗಿ ಮಾಡುವಂತಹ ಕಾರಣಗಳ ಪೈಕಿ ಒಂದು ಕಾರಣವಾಗಿದೆಯೆಂಬ ನೆಲೆಯಲ್ಲಿ ಇಲ್ಲಿ ಪ್ರಸ್ತಾಪಿಸಲಾಗಿದೆ.

8. ಈ ಸೂಕ್ತದ ತಾತ್ಪರ್ಯವೇನೆಂದರೆ, ನಾವು ನಿಮಗೆ ತೋರಿಸಿಕೊಟ್ಟಿರುವ ಒಂದು ದಾರಿಯು ಉನ್ನತಿಯ ಕಡೆಗೆ ಹೋಗುತ್ತದೆ. ಆದರೆ ಇದು ಕಷ್ಟಕರವೂ ಶ್ರಮದಾಯಕವೂ ಆಗಿದೆ. ಇನ್ನೊಂದು ಸುಲಭ ದಾರಿಯಾಗಿದ್ದು ಅದು ಹೊಂಡಗಳಿಗೆ ತಲುಪುತ್ತದೆ. ಇದೀಗ ಈ ಮಾನವನು ನಾವು ಅವನಿಗೆ ತೋರಿಸಿರುವ ಈ ಎರಡು ದಾರಿಗಳ ಪೈಕಿ ಅವನತಿಯ ಕಡೆಗೆ ಹೋಗುವ ದಾರಿಯನ್ನು ಹಿಡಿದನು ಮತ್ತು ಉನ್ನತಿಯ ಕಡೆಗೆ ಹೋಗುವಂತಹ ಕಷ್ಟಕರ ದಾರಿಯನ್ನು ಬಿಟ್ಟು ಬಿಟ್ಟನು.

9. ಇಲ್ಲಿ ಯಾವ ರೀತಿಯ ವೆಚ್ಚಗಳು ಮನುಷ್ಯನನ್ನು ಔನ್ನತ್ಯದೆಡೆಗೆ ತಲುಪಿಸುವುದೆಂದರೆ, ಒಬ್ಬ ಗುಲಾಮನನ್ನು ಸ್ವತಃ ಬಿಡುಗಡೆಗೊಳಿಸುವುದು, ಪರಿಹಾರ ಧನ ಕೊಟ್ಟು ತನ್ನ ಬಿಡುಗಡೆಗೆ ಸಾಧ್ಯವಾಗುವಂತೆ ಅವನಿಗೆ ಸಹಾಯ ಮಾಡುವುದು, ಯಾವನಾದರೊಬ್ಬ ಬಡವನನ್ನು ಸಾಲದಿಂದ ಮುಕ್ತಗೊಳಿಸುವುದು ಅಥವಾ ಯಾರಾದರೊಬ್ಬ ಅಸಹಾಯಕ ವ್ಯಕ್ತಿ ಯಾವುದಾದರೂ ದಂಡ ತೆರಲು ನಿರ್ಬಂಧಿತನಾಗಿದ್ದರೆ ಅವನನ್ನು ಅದರಿಂದ ಬಿಡುಗಡೆಗೊಳಿಸುವುದು, ಇದೇ ರೀತಿಯಲ್ಲಿ ಹಸಿದಿರುವಂತಹ ಸಮೀಪದ ಅನಾಥನಿಗೆ ಅಥವಾ ಕೇಳುವವರಾರೂ ಇಲ್ಲದ ಬಡತನದ ಬೇಗೆಯಲ್ಲಿ ಬಳಲಿ ಬೆಂಡಾದ ಹಸಿದವನಿಗೆ ಉಣಬಡಿಸುವುದು. ಈ ಸೂಕ್ತದಲ್ಲಿ ಪ್ರಸ್ತಾಪಿಸಲಾಗಿರುವ ಸತ್ಕರ್ಮಗಳಿಗೆ ಭಾರೀ ಪುಣ್ಯವಿದೆಯೆಂದು ಪ್ರವಾದಿಯವರ(ಸ) ವಚನಗಳಿಂದ ತಿಳಿದುಬರುತ್ತದೆ. ದರಿದ್ರರಿಗೆ ಸಹಾಯ ಮಾಡುವ ಕುರಿತು ಪ್ರವಾದಿಯವರು(ಸ) ಹೀಗೆ ಹೇಳಿದ್ದಾರೆಂದು ಅಬೂ ಹುರೈರಾ(ರ) ವರದಿ ಮಾಡಿರುವರು, ''ವಿಧವೆಯರಿಗಾಗಿ ಮತ್ತು ದರಿದ್ರರಿಗಾಗಿ ಪರಿಶ್ರಮ ಪಡುವವನು ಅಲ್ಲಾಹನ ಮಾರ್ಗದ ಯುದ್ಧದಲ್ಲಿ ಪರಿಶ್ರಮ ಪಡುವವನಂತಿರುತ್ತಾನೆ.'' ಅನಾಥರ ವಿಷಯದಲ್ಲಿ ಪ್ರವಾದಿ(ಸ) ಹೀಗೆ ಹೇಳಿರುವರು'' ತನ್ನ ಸಂಬಂಧಿಕನಾದ ಅಥವಾ ಸಂಬಂಧಿಕನಲ್ಲದ ಅನಾಥನನ್ನು ಪೋಷಿಸುವವನು ಮತ್ತು ನಾನು ಸ್ವರ್ಗದಲ್ಲಿ ಈ ರೀತಿ ಇರುವೆವು''. ಹೀಗೆ ಹೇಳಿ ಪ್ರವಾದಿಯವರು(ಸ) ತಮ್ಮ ತೋರು ಬೆರಳು ಮತ್ತು ನಡು ಬೆರಳನ್ನು ಎತ್ತಿ ತೋರಿಸಿದರು. ಎರಡು ಬೆರಳುಗಳ ನಡುವೆ ತುಸು ಅಂತರವನ್ನಿಟ್ಟರು (ಬುಖಾರಿ)

10. ಅರ್ಥಾತ್, ಅವನು ಅನಾಥನಾಗಿ ಬಿಟ್ಟೊಡನೆ ನೆರೆಹೊರೆಯವರು ಮತ್ತು ದೂರದ ಸಂಬಂಧಿಕರ ಮಾತಂತಿರಲಿ, ಸ್ವತಃ ಅವನ ತಂದೆಯ ಸಹೋದರರು, ಮಾವಂದಿರು ಮತ್ತು ಅಣ್ಣಂದಿರು ಸಹ ಅವನಿಂದ ಮುಖ ತಿರುಗಿಸಿಕೊಳ್ಳುತ್ತಾರೆ.

11. ಅರ್ಥಾತ್, ನಿಮ್ಮ ಸಮಾಜದಲ್ಲಿ ಬಡವರಿಗೆ ಊಟ ಕೊಡುವ ಪದ್ಧತಿಯೂ ಇಲ್ಲ, ಅದರ ಪ್ರಸ್ತಾಪವೂ ಇಲ್ಲ, ಅದರ ಚಿಂತೆ ಕೂಡಾ ಇಲ್ಲ.

12. ಅರ್ಥಾತ್, ನ್ಯಾಯ ಅನ್ಯಾಯವೆಂಬ ಭೇದವಿಲ್ಲದೇ ಯಾವುದೇ ಮಾರ್ಗದಿಂದ ಸಂಪತ್ತನ್ನು ಸಂಪಾದಿಸುವುದರಲ್ಲಿ ನಿಮಗೆ ಸ್ವಲ್ಪವೂ ಅಳುಕಿಲ್ಲ; ನಿಮ್ಮ ದುರಾಶೆಯ ಅಗ್ನಿಯು ಎಂದೂ ಶಮನವಾಗುವುದಿಲ್ಲ.



# 22. ಬಡ್ಡಿ ತಿನ್ನಬೇಡಿರಿ

''ಆದರೆ ಬಡ್ಡಿ ತಿನ್ನುವವರ ಅವಸ್ಥೆಯು ಶೈತಾನನ ಸೋಂಕಿನಿಂದ ಹುಚ್ಚನಾದವನಂತಿದೆ.[1] ಅವರು, 'ವ್ಯಾಪಾರವೂ ಬಡ್ಡಿಯಂತೆಯೇ ಇದೆಯಲ್ಲವೇ?'[2] ಎಂದೆನ್ನುವುದೇ ಈ ಅವಸ್ಥೆಯಲ್ಲಿ ಸಿಲುಕಿ ಬಿದ್ದಿರಲು ಕಾರಣ. ವಸ್ತುತಃ ಅಲ್ಲಾಹನು ವ್ಯಾಪಾರವನ್ನು ಧರ್ಮಸಮ್ಮತಗೊಳಿಸಿರುತ್ತಾನೆ ಮತ್ತು ಬಡ್ಡಿಯನ್ನು ನಿಷಿದ್ಧಗೊಳಿಸಿರುತ್ತಾನೆ.[3] ಆದುದರಿಂದ ತನ್ನ ಪ್ರಭುವಿನ ವತಿಯಿಂದ ಈ ಉಪದೇಶ ತಲಪಿದಾತನು ಮುಂದೆ ಬಡ್ಡಿಯ ವ್ಯವಹಾರವನ್ನು ವರ್ಜಿಸಿದರೆ, ಗತಕಾಲದಲ್ಲಿ ತಿಂದುದು ತಿಂದಾಯಿತು ಮತ್ತು ಅವರ ಪ್ರಕರಣವು ಅಲ್ಲಾಹನ ವಶವಿದೆ. ಈ ಆದೇಶದ ಅನಂತರವೂ ಈ ಕೃತ್ಯವನ್ನು ಪುನರಾವರ್ತಿಸಿದರೆ, ಅಂತಹವರು ನರಕವಾಸಿಗಳಾಗಿದ್ದು ಸದಾ ಅಲ್ಲೇ ನರಳುತ್ತಿರುವರು.'' (ಪವಿತ್ರ ಕುರ್‌ಆನ್,2:275)

''ಅಲ್ಲಾಹನು ಬಡ್ಡಿಯ ವ್ಯವಹಾರವನ್ನು ಅಳಿಸಿಬಿಡುತ್ತಾನೆ ಮತ್ತು ದಾನಧರ್ಮಗಳನ್ನು ವೃದ್ಧಿಸುತ್ತಾನೆ. ಅಲ್ಲಾಹನು ಕೃತಘ್ನ ದುಷ್ಕರ್ಮಿಗಳನ್ನು ಮೆಚ್ಚುವುದಿಲ್ಲ.[4]''

(ಪವಿತ್ರ ಕುರ್‌ಆನ್,2:276)

''...ನೀವು ನಿಜಕ್ಕೂ ವಿಶ್ವಾಸಿಗಳಾಗಿರುವಿರಾದರೆ, ಜನರಿಂದ ನಿಮಗೆ ಬರತಕ್ಕ ಬಡ್ಡಿಯನ್ನು ಬಿಟ್ಟುಬಿಡಿರಿ. ನೀವು ಹಾಗೆ ಮಾಡದಿದ್ದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಕಡೆಯಿಂದ ನಿಮ್ಮ ವಿರುದ್ಧ ಯುದ್ಧ ಘೋಷಣೆಯಿದೆಯೆಂದು ನಿಮಗೆ ತಿಳಿದಿರಲಿ.[5] ಇನ್ನಾದರೂ ಪಶ್ಚಾತ್ತಾಪ ಪಟ್ಟರೆ (ಮತ್ತು ಬಡ್ಡಿಯನ್ನು ವರ್ಜಿಸಿದರೆ) ಅಸಲು ಹಣ ಪಡೆಯಲು ನೀವು ಹಕ್ಕುದಾರರಾಗಿರುತ್ತೀರಿ. ನೀವು ಅಕ್ರಮವೆಸಗಲೂಬಾರದು. ನಿಮ್ಮ ಮೇಲೆ ಅಕ್ರಮವಾಗಲೂಬಾರದು.''

(ಪವಿತ್ರ ಕುರ್‌ಆನ್,2:278,279)

''ನಿಮ್ಮ ಸಾಲಗಾರನು 'ಕಾಸಿಲ್ಲದವನಾದರೆ' ಅವನಿಗೆ ಸುಸ್ಥಿತಿಯುಂಟಾಗುವ ತನಕ ಸಮಯಾವಕಾಶ ಕೊಡಿರಿ ಮತ್ತು ನೀವು ದಾನರೂಪದಲ್ಲಿ ಸಾಲವನ್ನೇ ಬಿಟ್ಟು ಕೊಟ್ಟರೆ ಅದು ನಿಮ್ಮ ಮಟ್ಟಿಗೆ ಇನ್ನಷ್ಟು ಉತ್ತಮವಾಗಿರುವುದು, ನೀವು ಅರಿತವರೇ ಆಗಿದ್ದರೆ.''[6]

(ಪವಿತ್ರ ಕುರ್‌ಆನ್,2:280)

## ಟಿಪ್ಪಣಿ:

1. ಅರಬರು ಮರುಳ ಮತ್ತು ಹುಚ್ಚನನ್ನು 'ಮಜ್ನೂನ್' (ಸೋಂಕಿನಿಂದ ಭ್ರಾಂತನಾದವ) ಎಂಬ ಪದದಿಂದ ವರ್ಣಿಸುತ್ತಿದ್ದರು. ಯಾರಿಗಾದರೂ ಹುಚ್ಚು ಹಿಡಿದ

ವೃತ್ತಾಂತವನ್ನು ಹೇಳಬೇಕಾದಾಗ ಅವನಿಗೆ ಯಕ್ಷ ಸೋಂಕು ತಗುಲಿದೆಯೆನ್ನುತ್ತಿದ್ದರು. ಕುರ್‌ಆನ್ ಇದೇ ಪಡೆನುಡಿಯನ್ನು ಇಲ್ಲಿ ಬಳಸಿ ಬಡ್ಡಿಕೋರನನ್ನು ಮತಿಹೀನನೆಂದಿದೆ. ಅರ್ಥಾತ್, ಮತಿಹೀನನಾದವನ ಚಟುವಟಿಕೆಗಳು ಬುದ್ಧಿಶಕ್ತಿಯನ್ನು ಕಳೆದುಕೊಂಡ ಕಾರಣದಿಂದ ತೂಕ ತಪ್ಪಿರುವಂತೆಯೇ ಬಡ್ಡಿಕೋರನೂ ಬಡ್ಡಿಯ ಲಾಲಸೆಯಿಂದ ಹುಚ್ಚನಾಗುತ್ತಾನೆ. ಬಡ್ಡಿಕೋರತನದಿಂದಾಗಿ ಮಾನವರೊಳಗಿರುವ ಪ್ರೇಮ, ಸಹೋದರತೆ, ಸಹಾನುಭೂತಿಗಳೆಲ್ಲಾ ಹೇಗೆ ಸಮೂಲ ನಾಶವಾಗುತ್ತವೆ, ಅದು ಸಾರ್ವಜನಿಕ ಹಿತಾಸಕ್ತಿಗಳ ಮೇಲೆ ಎಂತಹ ವಿನಾಶಕಾರೀ ಪರಿಣಾಮ ಬೀರುತ್ತದೆ ಮತ್ತು ಅವನು ಎಷ್ಟು ಮಂದಿಯ ದಾರಿದ್ರ್ಯದಿಂದ ತನ್ನ ಸಂಪತ್ತನ್ನು ವೃದ್ಧಿಸುತ್ತಿರುತ್ತಾನೆ! ತನ್ನ ಸ್ವಾರ್ಥದ ಹುಚ್ಚಿನಿಂದಾಗಿ ಇವುಗಳ ಪೈಕಿ ಯಾವುದರ ಪರಿವೆಯೂ ಅವನಿಗಿರುವುದಿಲ್ಲ. ಇದು ಇಹಲೋಕದಲ್ಲಿ ಅವನ ಹುಚ್ಚಿನ ಪರಿಸ್ಥಿತಿ. ಇಹದಲ್ಲಿ ಪ್ರಾಣ ಬಿಟ್ಟಿದ್ದ ಸ್ಥಿತಿಯಲ್ಲೇ ಪರಲೋಕದಲ್ಲೂ ಪ್ರತಿಯೊಬ್ಬನನ್ನು ಎಬ್ಬಿಸಲಾಗುವುದು. ಆದುದರಿಂದ ಬಡ್ಡಿಕೋರನು ನಿರ್ಣಾಯಕ ದಿನದಂದು ಹುಚ್ಚ ಹಾಗೂ ಮತಿಗೆಟ್ಟವನ ಸ್ಥಿತಿಯಲ್ಲಿ ಎಬ್ಬಿಸಲ್ಪಡುವನು.

2. ಅರ್ಥಾತ್, ವ್ಯಾಪಾರದಲ್ಲಿ ತೊಡಗಿಸಿದ ಹಣದ ಮೇಲೆ ಬರುವ ಲಾಭವು ಧರ್ಮಸಮ್ಮತವಾದುದೆಂದಾದರೆ, ಸಾಲರೂಪದಲ್ಲಿ ಕೊಟ್ಟ ಹಣಕ್ಕೆ ಬರುವ ಲಾಭವು (ಅರ್ಥಾತ್ ಬಡ್ಡಿಯು) ಧರ್ಮ ನಿಷಿದ್ಧವಾಗುವುದು ಹೇಗೆ ಎಂಬ ಅವರ ಪ್ರಶ್ನೆಗೆ ಅವರು ಒಪ್ಪಿಕೊಂಡ ಸಿದ್ಧಾಂತದ ದೋಷವೇ ಕಾರಣ. ವ್ಯಾಪಾರದಲ್ಲಿ ತೊಡಗಿಸಿದ ಮೂಲಧನದ ಮೇಲೆ ಪಡೆಯುವ ಲಾಭ ಮತ್ತು ಸಾಲವಾಗಿ ಕೊಟ್ಟ ಅಸಲಿನ ಮೇಲೆ ಬರುವ ಬಡ್ಡಿ, ಇವೆರಡರಲ್ಲಿರುವ ವ್ಯತ್ಯಾಸವನ್ನು ಅವರು ತಿಳಿಯುವುದಿಲ್ಲ. ಇವೆರಡೂ ಒಂದೇ ಎಂದು ಅವರ ಎಣಿಕೆ. ಆಧುನಿಕ ಕಾಲದ ಬಡ್ಡಿ ಕೋರರೂ ಬಡ್ಡಿಯ ಪರವಾಗಿ ಇದೇ ವಾದವನ್ನು ಮುಂದಿಡುತ್ತಾರೆ. ಒಬ್ಬನು ತಾನು ಸ್ವತಃ ಲಾಭ ಗಳಿಸಬಹುದಾಗಿದ್ದ ಹಣವನ್ನು ಇನ್ನೊಬ್ಬನಿಗೆ ಸಾಲ ರೂಪದಲ್ಲಿ ಕೊಡುತ್ತಾನೆ. ಸಾಲ ಪಡೆದುಕೊಂಡವನು ಅದರಿಂದ ಲಾಭವನ್ನೇ ಪಡೆಯುತ್ತಾನೆ. ಸಾಲ ಕೊಟ್ಟಾತನ ಹಣದಿಂದ ಸಾಲ ಪಡೆದಾತನು ಹೊಂದುತ್ತಿರುವ ಲಾಭದ ಒಂದಂಶವನ್ನು ಸಾಲ ಕೊಟ್ಟಾತನಿಗೆ ಯಾಕೆ ಕೊಡಬಾರದು? ಇದೇ ಅವರು ಕೇಳುವ ಪ್ರಶ್ನೆ. ಆದರೆ ಅವರು ಇದನ್ನು ಚೆನ್ನಾಗಿ ವಿವೇಚಿಸುವುದಿಲ್ಲ. ಈ ಜಗತ್ತಿನಲ್ಲಿ ಜನರು ತಮ್ಮ ಶ್ರಮದಿಂದ ಅಥವಾ ಶ್ರಮ ಮತ್ತು ಬಂಡವಾಳಗಳೆರಡರಿಂದಲೂ ನಡೆಸುತ್ತಿರುವ ವ್ಯಾಪಾರ, ಕೃಷಿ, ಕೈಗಾರಿಕೋದ್ಯಮಗಳಂತಹ ವ್ಯವಹಾರಗಳ ಪೈಕಿ ನಷ್ಟದ ಭಯವೇ(Risk) ಇಲ್ಲದೇ ಖಾತ್ರಿಯಾಗಿ ಲಾಭವೇ ಸಿಗುವುದೆಂಬ ಧೈರ್ಯವಿರುವಂತಹುದು ಒಂದೂ ಇಲ್ಲ. ಹೀಗಿರುವಾಗ ಬಂಡವಾಳಗಾರನೊಬ್ಬನು ಮಾತ್ರ ಯಾವುದೇ ನಷ್ಟದ ಭಯವಿಲ್ಲದೆ ನಿಶ್ಚಿತ ಮತ್ತು ಖಾತ್ರಿಯಾದ ಲಾಭವನ್ನೇ ಹೊಂದಲು ಹಕ್ಕುದಾರನಾಗಿರಬೇಕಾದ ಔಚಿತ್ಯವೇನು? ಕೇವಲ ಹಣವನ್ನು ಮಾತ್ರ ಸಾಲವಾಗಿ ಕೊಟ್ಟಾತನು ಯಾವುದೇ ನಷ್ಟದ ಭಯವಿಲ್ಲದೇ ನಿಶ್ಚಿತ ದರದಲ್ಲಿ ಲಾಭವನ್ನೇ ಪಡೆಯುತ್ತಾ ಇರುವುದು

ಸರಿಯೇ? ಇದು ಸರಿಯೆಂದಾದರೆ ಅದ್ಯಾವ ಬುದ್ಧಿ, ತರ್ಕ, ನ್ಯಾಯ ಅಥವಾ ಶಾಸ್ತ್ರಪ್ರಕಾರ? ಒಬ್ಬನು ಒಂದು ಕಾರ್ಖಾನೆಗಾಗಿ 20 ವರ್ಷಗಳ ಕಾಲಾವಧಿಗೆ ಹಣವನ್ನು ಸಾಲಕೊಟ್ಟು, ಈಗಲೇ ಮುಂದೆ 20 ವರ್ಷಗಳ ತನಕ ಶೇಕಡ ಐದರ ದರದಲ್ಲಿ ಎಡೆಬಿಡದೆ ತನಗೆ ಸಲ್ಲಬೇಕಾದ ಲಾಭವನ್ನು ಪಡೆಯುವ ಹಕ್ಕನ್ನು ನಿಶ್ಚಯಿಸಿಕೊಳ್ಳುವುದು ಸರಿಯೆನ್ನುವುದು ಹೇಗೆ? ಮುಂದಿನ 20 ವರ್ಷಗಳ ವರೆಗೆ ಆ ಕಾರ್ಖಾನೆಯಲ್ಲಿ ತಯಾರಾಗುವ ವಸ್ತುಗಳ ಬೆಲೆಯು ಮಾರುಕಟ್ಟೆಯಲ್ಲಿ ಯಾವ ಏರಿಳಿತಗಳನ್ನು ಕಾಣುವುದೆಂದು ಈಗಲೇ ಹೇಳುವುದಂತೂ ಸಾಧ್ಯವೇ ಇಲ್ಲ, ಹೀಗಿರುವಾಗ ಇದು ನ್ಯಾಯ ಸಮ್ಮತವಾಗಿರುವುದೆಂತು?

3. ವ್ಯಾಪಾರ ಮತ್ತು ಬಡ್ಡಿಯ ಮಧ್ಯೆ ಎಷ್ಟೊಂದು ದೊಡ್ಡ ವ್ಯತ್ಯಾಸವಾಗಿ ಬಿಡುತ್ತದೆಂದರೆ ವ್ಯಾಪಾರವು ಮಾನವ ನಾಗರಿಕತೆಯನ್ನು ನಿರ್ಮಿಸುವ ಒಂದು ಶಕ್ತಿಯಾಗಿದ್ದರೆ ಬಡ್ಡಿಯ ವ್ಯವಹಾರವು ಅದರ ವಿನಾಶಕ್ಕೆ ಕಾರಣವಾಗಿರುತ್ತದೆ. ನೈತಿಕ ದೃಷ್ಟಿಯಿಂದ ಬಡ್ಡಿಯು ಜನರಲ್ಲಿ ಲೋಭ, ಸ್ವಾರ್ಥ, ದೌರ್ಜನ್ಯ, ನಿರ್ದಯತೆ, ಧನಾರಾಧನೆಗಳಂತಹ ದುರ್ಗುಣಗಳನ್ನುಂಟು ಮಾಡಿ ಸಹಾನುಭೂತಿ ಮತ್ತು ಪರಸ್ಪರ ಸಹಾಯ ಸಹಕಾರಗಳ ಬೇರನ್ನೇ ಕಿತ್ತೊಗೆಯುತ್ತದೆ. ಆದುದರಿಂದಲೇ ವ್ಯಾಪಾರ ಮತ್ತು ಬಡ್ಡಿ ಇವುಗಳ ನಡುವೆ ಬಹುದೊಡ್ಡ ಅಂತರವಿದ್ದು ಬಡ್ಡಿಯು ಆರ್ಥಿಕ ದೃಷ್ಟಿಯಿಂದಲೂ ನೈತಿಕ ದೃಷ್ಟಿಯಿಂದಲೂ ಮಾನವ ವರ್ಗಕ್ಕೆ ವಿನಾಶಕಾರಿಯಾಗಿರುತ್ತದೆ.

ಫೈನಾನ್ಸ್‌ಗಳಿಂದಲೂ ಬ್ಲೇಡ್ ಕಂಪೆನಿಗಳಿಂದಲೂ ಹಣ ಸಾಲ ಪಡೆದು ಮರು ಪಾವತಿಸಲು ಚ್ಯುತಿಯಾದ ಕಾರಣ ಅನೇಕ ಜನರು ಬೀದಿಪಾಲಾಗಿದ್ದಾರೆ, ಅನೇಕ ಕುಟುಂಬಗಳು ಸರ್ವನಾಶವಾಗಿವೆ. ತಮ್ಮ ಮನೆಮಾರುಗಳನ್ನು ಅಡವಿಡಬೇಕಾಗಿ ಬಂದಿವೆ ಅಥವಾ ಮಾರಬೇಕಾಗಿ ಬಂದಿವೆ. ಮಾತ್ರವಲ್ಲ ಅನೇಕ ಜನರನ್ನು ಆತ್ಮಹತ್ಯೆ ಮಾಡುವಂತೆ ಮಾಡಿದೆ ಎಂಬುದನ್ನು ಈ ಸೂಕ್ತದ ಬೆಳಕಿನಲ್ಲಿ ಇದಕ್ಕೆ ಸೇರಿಸಿ ಓದಬೇಕಿದೆ.

ಈ ಸೂಕ್ತದಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದಲೂ ಆರ್ಥಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದಲೂ ಸರಿಯಾಗಿರುವ ಒಂದು ಸತ್ಯವನ್ನು ವಿವರಿಸಲಾಗಿರುತ್ತದೆ. ಬಾಹ್ಯ ದೃಷ್ಟಿಯಿಂದ ನೋಡುವಾಗ ಬಡ್ಡಿಯಿಂದ ಸಂಪತ್ತು ವೃದ್ಧಿಸುವಂತೆಯೂ ದಾನಧರ್ಮಗಳಿಂದ ಅದು ಕ್ಷಯಿಸುವಂತೆಯೂ ತೋರುತ್ತದೆ. ಆದರೆ ವಸ್ತುಸ್ಥಿತಿ ಇದಕ್ಕೆ ವ್ಯತಿರಿಕ್ತವಾಗಿದೆ. ಬಡ್ಡಿಯು ನೈತಿಕ, ಆಧ್ಯಾತ್ಮಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಗತಿಗೆ ತಡೆ ಮಾತ್ರವಲ್ಲ, ಅವುಗಳ ಅಧೋಗತಿಗೆ ಕಾರಣವಾಗಿದೆ. ಇದೇ ಅಲ್ಲಾಹನು ನಿಶ್ಚಯಿಸಿದ ಪ್ರಕೃತಿ ನಿಯಮ. ಇದಕ್ಕೆ ವ್ಯತಿರಿಕ್ತವಾಗಿ ದಾನಧರ್ಮಗಳಿಂದ (ಇದರಲ್ಲಿ ಬಡ್ಡಿರಹಿತ ಸಾಲ ಕೊಡುವುದೂ ಸೇರಿದೆ) ನೈತಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕವೇ ಮೊದಲಾದ ಸರ್ವತೋಮುಖ ವಿಕಾಸವುಂಟಾಗುತ್ತದೆ.

4. ಅಲ್ಲಾಹನು ತನ್ನ ದಾಸನ ಮೇಲೆ ಅನುಗ್ರಹ ತೋರಿದಂತೆಯೇ ಅನುಗ್ರಹ ಹೊಂದಿದ ದಾಸನೂ ಇತರ ದಾಸರ ಮೇಲೆ ಅನುಗ್ರಹ ತೋರಬೇಕಾದುದು ದೇವಾನುಗ್ರಹದ ಉಪಕಾರ

ಸ್ಮರಣೆಯ ಸರಿಯಾದ ವಿಧಾನ. ಹಾಗೆ ಮಾಡದೆ ಅದಕ್ಕೆ ವ್ಯತಿರಿಕ್ತವಾಗಿ ತನ್ನ ಸಂಪತ್ತಿನ ಬಲವನ್ನು ಪ್ರಯೋಗಿಸಿ ದೇವಾನುಗ್ರಹದಲ್ಲಿ ಅವಶ್ಯಕತೆಗಿಂತ ಕಡಿಮೆ ಪಾಲು ಪಡೆದವರಿಂದಲೂ ಒಂದಂಶವನ್ನು ಕಸಿದುಕೊಳ್ಳುವಾತನು ನಿಜಕ್ಕೂ ಮಹಾಕೃತಘ್ನನೂ, ಹಿಂಸಕನೂ, ಅಕ್ರಮಿಯೂ ದುಷ್ಕರ್ಮಿಯೂ ಆಗಿರುತ್ತಾನೆ.

5. ಅರ್ಥಾತ್, ಇಸ್ಲಾಮೀ ರಾಷ್ಟ್ರದಲ್ಲಿ, ಬಡ್ಡಿ ತಿಂದವನನ್ನು ಪಶ್ಚಾತ್ತಾಪ ಪಡಲಿಕ್ಕಾಗಿ ಒತ್ತಾಯಪಡಿಸಬೇಕು ಮತ್ತು ಅವನು ಬಡ್ಡಿಯ ವ್ಯವಹಾರವನ್ನು ಬಿಡದಿದ್ದರೆ ಅವನನ್ನು ವಧಿಸಿಬಿಡಬೇಕು. ಇನ್ನು ಕೆಲವು ವಿದ್ವಾಂಸರು, ಇಂಥವನನ್ನು ಸೆರೆಯಲ್ಲಿಟ್ಟರೆ ಸಾಕೆಂದೂ ಬಡ್ಡಿಯನ್ನು ತ್ಯಜಿಸುವ ಪ್ರತಿಜ್ಞೆ ಮಾಡುವವರೆಗೂ ಬಿಡುಗಡೆ ಮಾಡಬಾರದೆಂದೂ ಹೇಳುತ್ತಾರೆ.

6. ಸಾಲ ಮರುಪಾವತಿ ಮಾಡಲಾಗದಂತಹ ಸ್ಥಿತಿ ಬಂದೊದಗಿದಾತನಿಗೆ ಇನ್ನಷ್ಟು ಅವಧಿ ಕೊಡಲಿಕ್ಕಾಗಿ ಸಾಲ ಕೊಟ್ಟವರನ್ನು ಒತ್ತಾಯ ಪಡಿಸಲು ಮತ್ತು ಕೆಲವೊಮ್ಮೆ ಸಾಲದ ಸಂಪೂರ್ಣ ಹಣ ಇಲ್ಲವೆ ಅದರ ಒಂದಂಶವನ್ನು ಮಾಫಿ ಮಾಡಿಸಲು ಇಸ್ಲಾಮೀ ನ್ಯಾಯಾಲಯವು ಅಧಿಕಾರ ಹೊಂದಿದೆಯೆಂಬ ಧರ್ಮಶಾಸ್ತ್ರದ ವಿಧಿಯನ್ನು ಈ ಸೂಕ್ತದಿಂದಲೇ ಆಯ್ದುಕೊಳ್ಳಲಾಗಿದೆ. ಪ್ರವಾದಿವಚನದಲ್ಲಿ ಹೀಗೆ ಉಲ್ಲೇಖವಿದೆ, ಒಬ್ಬನ ವ್ಯಾಪಾರದಲ್ಲಿ ನಷ್ಟವುಂಟಾಗಿ ಅವನ ಮೇಲೆ ತುಂಬಾ ಸಾಲದ ಹೊರ ಬಿತ್ತು. ಈ ಪ್ರಕರಣವು ಪ್ರವಾದಿಯವರ(ಸ) ಮುಂದೆ ಬಂತು. ನಿಮ್ಮ ಸಹೋದರನಿಗೆ ಸಹಾಯ ಮಾಡಿರೆಂದು ಪ್ರವಾದಿಯವರು(ಸ) ಜನರಲ್ಲಿ ಮನವಿ ಮಾಡಿಕೊಂಡರು. ಆ ಪ್ರಕಾರ ಅನೇಕರು ಆ ವ್ಯಕ್ತಿಗೆ ಧನ ಸಹಾಯ ಮಾಡಿದರು. ಆದರೂ ಸಾಲ ಸಂಪೂರ್ಣ ಭರ್ತಿಯಾಗಲಿಲ್ಲ, ಆಗ ಪ್ರವಾದಿ(ಸ) ಸಾಲ ಕೊಟ್ಟವರೊಡನೆ, ಇನ್ನು ಸಾಕು. ಇಷ್ಟನ್ನೇ ಪಡಕೊಂಡು ಅವನನ್ನು ಬಿಟ್ಟುಬಿಡಿರಿ, ಇದಕ್ಕಿಂತ ಹೆಚ್ಚು ನಿಮಗೆ ಕೊಡಿಸಲು ಸಾಧ್ಯವಾಗದು ಎಂದರು. ಸಾಲ ಭರ್ತಿ ಮಾಡಲಿಕ್ಕಾಗಿ ಸಾಲಗಾರನು ವಾಸಿಸುವ ಮನೆ, ಅಡುಗೆಯ ಪಾತ್ರೆಗಳು, ಉಡುವ ಬಟ್ಟೆ ಮತ್ತು ಅವನು ಕೆಲಸ ಮಾಡುವ ಉಪಕರಣಗಳನ್ನು ಯಾವ ಸ್ಥಿತಿಯಲ್ಲೂ ಜಪ್ತಿ ಮಾಡಬಾರದೆಂದು ಕರ್ಮಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.



# 23. ಅಹಂಕಾರ ಪಡಬಾರದು

''ಭೂಮಿಯ ಮೇಲೆ ದರ್ಪದಿಂದ ನಡೆಯಬೇಡಿರಿ. ನೀವು ಭೂಮಿಯನ್ನು ಸೀಳಲಾರಿರಿ ಮತ್ತು ಪರ್ವತಗಳ ಶಿಖರಕ್ಕೂ ತಲಪಲಾರಿರಿ.'' (ಪವಿತ್ರ ಕುರ್‌ಆನ್,17:37)

''ಜನರೊಡನೆ ಮುಖ ತಿರುಗಿಸಿ ಮಾತಾಡಬೇಡ. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡ, ದುರಭಿಮಾನ ಹಾಗೂ ಅಹಂಕಾರ ಪಡುವವನನ್ನು ಅಲ್ಲಾಹನು ಮೆಚ್ಚುವುದಿಲ್ಲ.'' (ಪವಿತ್ರ ಕುರ್‌ಆನ್,31:18)

''ತಮ್ಮ ಮನೆಗಳಿಂದ ಅಹಂಭಾವದಿಂದಲೂ ಜನರಿಗೆ ತಮ್ಮ ಠೀವಿಯನ್ನು ತೋರಿಸುತ್ತಲೂ ಹೊರಡುವವರ ರೀತಿ ನೀತಿಗಳನ್ನು ಅನುಕರಿಸಬೇಡಿರಿ. ಅಲ್ಲಾಹನ ಮಾರ್ಗದಿಂದ ತಡೆಯುವುದು ಅವರ ನೀತಿ.[1] ಅವರ ಯಾವ ಕೃತ್ಯವೂ ಅಲ್ಲಾಹನ ಹಿಡಿತದಿಂದ ಹೊರಗಿಲ್ಲ.'' (ಪವಿತ್ರ ಕುರ್‌ಆನ್,8:47)

''ನಮ್ಮ ವಚನಗಳನ್ನು ಸುಳ್ಳಾಗಿಸುವವರು ಮತ್ತು ಅವುಗಳ ವಿರುದ್ಧ ಉದ್ಧಟತನ ತೋರುವವರೇ[2] ನರಕಾಗ್ನಿಯವರಾಗಿದ್ದು ಅಲ್ಲಿ ಅವರು ಸದಾ ಕಾಲ ವಾಸಿಸುವರು.''

(ಪವಿತ್ರ ಕುರ್‌ಆನ್,7:36)

## ಟಿಪ್ಪಣಿ:

1. ಇದು ಸತ್ಯನಿಷೇಧಿಗಳಾದ ಕುರೈಶರ ಕಡೆಗೆ ಸೂಚನೆ. ಅವರ ಸೈನ್ಯವು ಮಕ್ಕಾದಿಂದ ಹೊರಡುವಾಗ ಠೀವಿ ಡಂಬಾಚಾರಗಳೊಂದಿಗೆ ಹೊರಡುತ್ತಿತ್ತು. ಹಾಡುಗಾರ್ತಿಯರೂ ನರ್ತಕಿಯರೂ ವಾದ್ಯದವರೂ ಸಂಗಡವಿದ್ದರು. ಅಲ್ಲಲ್ಲಿ ತಂಗುತ್ತ ನೃತ್ಯ, ಸಂಗೀತ ಮೇಳಗಳನ್ನೂ ಮದ್ಯಪಾನ ಕೂಟಗಳನ್ನೂ ಏರ್ಪಡಿಸುತ್ತ ಮುಂದೆ ಸಾಗುತ್ತಿದ್ದರು. ದಾರಿಯಲ್ಲಿದ್ದ ಗೋತ್ರಗಳ ಮತ್ತು ಗ್ರಾಮವಾಸಿಗಳ ಮುಂದೆ ತಮ್ಮ ಶಕ್ತಿ, ಠೀವಿ, ಶೌರ್ಯ, ಜನಬಲ ಮತ್ತು ಸಾಧನ ಸಾಮಗ್ರಿ ಶಸ್ತ್ರಾಸ್ತ್ರಗಳ ಬಾಹುಳ್ಯವನ್ನು ಪ್ರದರ್ಶಿಸುತ್ತ ಅವರಲ್ಲಿ ಭೀತಿ ಹುಟ್ಟಿಸುತ್ತ ನಮ್ಮನ್ನು ಎದುರಿಸತಕ್ಕವರು ಯಾರಿದ್ದಾರೆ? ಎಂದು ಜಂಭ ಕೊಚ್ಚಿಕೊಳ್ಳುತ್ತಾ ಹೋಗುತ್ತಿದ್ದರು. ಇದು ಅವರ ನೈತಿಕ ಸ್ಥಿತಿಯಾಗಿತ್ತು. ಇದಕ್ಕಾಗಿ ಮುಸ್ಲಿಮರನ್ನು ನೀವೆಲ್ಲಾದರೂ ಹೀಗಾಗಿ ಬಿಡಬಾರದೆಂದು ಎಚ್ಚರಿಸಲಾಗುತ್ತಿದೆ. ಅಲ್ಲಾಹನು ನಿಮಗೆ ಪ್ರದಾನ ಮಾಡಿರುವ ಸತ್ಯವಿಶ್ವಾಸ ಹಾಗೂ ಸತ್ಯಸಂಧತೆಯ ಫಲವಾಗಿ ನಿಮ್ಮ ಶೀಲ, ಚಾರಿತ್ರ್ಯಗಳೂ ಶುದ್ಧವಾಗಿರಬೇಕು ಮತ್ತು ನಿಮ್ಮ ಹೋರಾಟದ ಗುರಿಯೂ ಶುದ್ಧವಾಗಿರಬೇಕು ಎನ್ನಲಾಗಿದೆ. ಈ ಆದೇಶವು ಆ ಕಾಲಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅದು ಇಂದಿಗೂ

ಎಂದೆಂದಿಗೂ ಅನ್ವಯವಾಗುತ್ತದೆ. ಸತ್ಯನಿಷೇಧಿಗಳ ಸೇನೆಗಳ ಸ್ಥಿತಿಗತಿ ಅಂದು ಹೇಗಿತ್ತೋ ಹಾಗೆಯೇ ಇಂದೂ ಇದೆ. ವೇಶ್ಯಾಗೃಹಗಳು, ಅಶ್ಲೀಲತೆಯ ಕೇಂದ್ರಗಳು ಮತ್ತು ಶರಾಬಿನ ಪೀಪಾಯಿಗಳು ದಿನಬಳಕೆಯ ವಸ್ತುಗಳಂತೆ ಅವರನ್ನು ಅಂಟಿಕೊಂಡಿರುತ್ತವೆ. ಇದು ರಹಸ್ಯವಾಗಿಯೇನೂ ಅಲ್ಲ, ಬಹಿರಂಗವಾಗಿ ಅತ್ಯಂತ ಲಜ್ಜಾಹೀನತೆಯೊಂದಿಗೆ ಹೆಣ್ಣು ಮತ್ತು ಹೆಂಡದ ಅತಿ ಹೆಚ್ಚಿನ ಪ್ರಮಾಣಕ್ಕಾಗಿ ಅವರು ಆಗ್ರಹಿಸುತ್ತಾರೆ.

ಇವತ್ತು ನಮ್ಮನ್ನಾಳುವ ಹೊಲಸು ರಾಜಕಾರಣಿಗಳ ಮತ್ತು ಅಧಿಕಾರಿಗಳ ಸ್ವಭಾವವೂ ಇದುವೇ ಆಗಿವೆ. ಪ್ರತಿಯೊಬ್ಬನೂ ನನ್ನ ಮುಂದೆ ಮಾನವ ಕಲ್ಯಾಣವಲ್ಲದೇ ಬೇರೆ ಯಾವ ಉದ್ದೇಶವೂ ಇಲ್ಲ ಎಂದು ಅತ್ಯಂತ ಧೂರ್ತತನದಿಂದ ಭರವಸೆ ಕೊಡುತ್ತಾ ಇರುತ್ತಾನೆ. ಆದರೆ ವಾಸ್ತವದಲ್ಲಿ ಅವನು ತನ್ನ ಸ್ವಾರ್ಥ ಹಿತಾಸಕ್ತಿ ಮತ್ತು ಡಂಬಾಚಾರಗಳಿಂದ ತನ್ನ ಮತ್ತು ತನ್ನ ಕುಟುಂಬದ ಕಲ್ಯಾಣಕ್ಕಾಗಿ ಇಡೀ ರಾಷ್ಟ್ರವನ್ನೇ ಕೊಳ್ಳೆ ಹೊಡೆದು ಬಲಿಕೊಡುತ್ತಾನೆಯೇ ವಿನಾ ರಾಷ್ಟ್ರದ ಒಳಿತಿಗಾಗಿ ಕಿಂಚಿತ್ತೂ ತಲೆಕೆಡಿಸಿಕೊಳ್ಳುವುದಿಲ್ಲ.

ಸೃಷ್ಟಿಕರ್ತನು ತನ್ನ ಭೂಮಿಯಲ್ಲಿರುವ ಸಕಲ ಮಾನವರಿಗಾಗಿ ಏನನ್ನೆಲ್ಲ ಉಂಟು ಮಾಡಿರುವನೋ ಅವನ್ನೆಲ್ಲ ತಮ್ಮ ಜನಾಂಗ ಮಾತ್ರ ಉಪಯೋಗಿಸಬೇಕೆಂದೂ ಇತರರು ತಮ್ಮ ಸೇವಕರೂ ಅಧೀನರೂ ಆಗಿರಬೇಕೆಂಬುದೂ ಅವರ ಹೋರಾಟದ ಉದ್ದೇಶ. ಆದುದರಿಂದ ಈ ಕರ್ಮಭ್ರಷ್ಟ ದುರಾಚಾರಿಗಳ ವರ್ತನೆಯನ್ನನುಸರಿಸಬಾರದೆಂದೂ ಯಾವ ದುರುದ್ದೇಶಗಳಿಗಾಗಿ ಇವರು ತಮ್ಮ ತನುಧನಗಳನ್ನು ವ್ಯಯಿಸುತ್ತಾರೋ ಅವುಗಳಿಂದ ದೂರವಿರಬೇಕೆಂದೂ ಕುರ್‌ಆನ್ ಸತ್ಯವಿಶ್ವಾಸಿಗಳಿಗೆ ಈ ಸಾರ್ವಕಾಲಿಕ ಆದೇಶವನ್ನೀಯುತ್ತದೆ.

2. ಕುರ್‌ಆನಿನಲ್ಲಿ ಹ. ಆದಮ್(ಅ) ಮತ್ತು ಹವ್ವಾರನ್ನು ಸ್ವರ್ಗದಿಂದ ಇಳಿಸಿದ ಪ್ರಸ್ತಾಪ ಬಂದಿರುವಲ್ಲೆಲ್ಲಾ ಈ ಮಾತನ್ನು ಹೇಳಲಾಗಿದೆ. ಅರ್ಥಾತ್, ಮಾನವ ವರ್ಗದ ಆರಂಭವಾಗುತ್ತಿರುವಾಗಲೇ ಇದನ್ನು ಸ್ಪಷ್ಟವಾಗಿ ತಿಳಿಸಿ ಬಿಡಲಾಗಿದೆ. ಇದರ ಅರ್ಥವೇನೆಂದರೆ, ಪ್ರತಿಯೊಬ್ಬ ಪ್ರವಾದಿಯಿಂದಲೂ ಈ ಬಗ್ಗೆ ಪ್ರಮಾಣ ವಚನ ಪಡೆದುಕೊಳ್ಳಲಾಗುತ್ತಿತ್ತು. ಪ್ರವಾದಿಯಿಂದ ಪಡೆದ ಪ್ರಮಾಣ ವಚನಕ್ಕೆ ಅವರ ಅನುಯಾಯಿಗಳು ಬಾಧ್ಯಸ್ತರಾಗುವುದು ಸಹಜ. ಇಲ್ಲಿ ನೀಡಿರುವ ಆದೇಶವೆಂದರೆ ನೀವು ಬಾಧ್ಯತೆ ಹೊಂದಿರುವ ಅದೇ ಧರ್ಮದ ಆಹ್ವಾನ ಮತ್ತು ಸಂಸ್ಥಾಪನೆಗಾಗಿ ನಮ್ಮ ಕಡೆಯಿಂದ ಕಳುಹಿಸಲ್ಪಡುವ ಪ್ರವಾದಿಗೆ ನೀವು ಸಹಕಾರ ನೀಡಬೇಕಾಗುವುದು. ಅವರೊಂದಿಗೆ ಪಕ್ಷಪಾತವೆಸಗಬಾರದು. ನಿಮ್ಮನ್ನೇ ನೀವು ಧರ್ಮದ ಏಕಾಧಿಕಾರಿಗಳೆಂದು ಭಾವಿಸಿಕೊಳ್ಳಬಾರದು. ಸತ್ಯವನ್ನು ವಿರೋಧಿಸಬಾರದು. ನಮ್ಮ ಕಡೆಯಿಂದ ಎಲ್ಲೇ ಆಗಲಿ, ಯಾರೇ ಆಗಲಿ ಸತ್ಯದ ಧ್ವಜವನ್ನೇರಿಸಲಿಕ್ಕಾಗಿ ಎಬ್ಬಿಸಲ್ಪಟ್ಟರೆ ಆ ಧ್ವಜದ ಕೆಳಗೆ ನೀವೂ ಒಟ್ಟು ಸೇರಬೇಕು. ಹ. ಮುಹಮ್ಮದ್‌ರಿಗಿಂತ(ಸ) ಮೊದಲು ಪ್ರತಿಯೊಬ್ಬ ಪ್ರವಾದಿಯಿಂದಲೂ ಇದೇ ಪ್ರಮಾಣ ವಚನ ಪಡೆದುಕೊಳ್ಳಲಾಗುತ್ತಿತ್ತೆಂದೂ ಈ ಕಾರಣದಿಂದಲೇ ಪ್ರತಿಯೊಬ್ಬ ಪ್ರವಾದಿಯೂ ತನ್ನ ಸಮುದಾಯಕ್ಕೆ ಆನಂತರ ಬರಲಿರುವ ಪ್ರವಾದಿಯವರ

ಸಮಾಚಾರ ತಿಳಿಸಿ, ಅವರಿಗೆ ಸಹಕಾರ ನೀಡಬೇಕೆಂದು ಹೇಳಿರುವುದನ್ನೂ ಇಲ್ಲಿ ಗಮನಿಸಬೇಕು. ಆದರೆ ಕುರ್‌ಆನಿನಲ್ಲಾಗಲೀ ಪ್ರವಾದಿವಚನದಲ್ಲಾಗಲೀ ಎಲ್ಲೂ ಹ. ಮುಹಮ್ಮದ್‌ರೊಡನೆ ಇಂತಹ ಕರಾರನ್ನು ಪಡೆದುದಾಗಲೀ, ಅವರು ತಮ್ಮ ಉಮ್ಮತ್‌ಗೆ (ಸಮುದಾಯಕ್ಕೆ) ಮುಂಬರುವ ಪ್ರವಾದಿಯ ಸಮಾಚಾರ ತಿಳಿಸಿ ಅವರ ಮೇಲೆ ವಿಶ್ವಾಸವಿಡಬೇಕೆಂದು ಆದೇಶ ಕೊಟ್ಟಿರುವುದಾಗಲೀ ಇಲ್ಲ. ಕುರ್‌ಆನಿನಲ್ಲಂತೂ ಪ್ರವಾದಿಯವರನ್ನು ಸ್ಪಷ್ಟ ಮಾತುಗಳಿಂದ ಖಾತಮುನ್ನಬಿಯ್ಯೀನ್ (ಅಂತ್ಯಪ್ರವಾದಿ) ಎನ್ನಲಾಗಿದೆ.



# 24. ಒಳಿತನ್ನು ಮಾಡಿರಿ ಮತ್ತು ಆಜ್ಞಾಪಿಸಿರಿ

''ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವರು.''

(ಪವಿತ್ರ ಕುರ್‌ಆನ್,3:104)

''ನಿಮ್ಮಲ್ಲಿ ಅನುಗ್ರಹೀತರು ಮತ್ತು ಸಾಮರ್ಥ್ಯವುಳ್ಳವರು ತಮ್ಮ ಸಂಬಂಧಿಕರಿಗೂ ದರಿದ್ರರಿಗೂ ಅಲ್ಲಾಹನ ಮಾರ್ಗದಲ್ಲಿ ವಲಸೆ ಹೋಗುವವರಿಗೂ ಸಹಾಯ ಮಾಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿ ಬಿಡಬಾರದು. ಅವರನ್ನು ಕ್ಷಮಿಸಿ ಬಿಡಬೇಕು ಮತ್ತು ಮನ್ನಿಸಬೇಕು. ಅಲ್ಲಾಹನು ನಿಮ್ಮನ್ನು ಕ್ಷಮಿಸಬೇಕೆಂದು ನೀವು ಇಚ್ಛಿಸುವುದಿಲ್ಲವೇ? ಅಲ್ಲಾಹ್ ಅತ್ಯಂತ ಕ್ಷಮಾಶೀಲನೂ ಕರುಣಾಳುವೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್,24:22)



# 25. ವ್ಯಭಿಚಾರವೆಸಗಬೇಡಿರಿ

''ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ.'' (ಪವಿತ್ರ ಕುರ್‌ಆನ್,17:32)

## ಟಿಪ್ಪಣಿ:

ಅರ್ಥಾತ್, 'ವ್ಯಭಿಚಾರದ ಹತ್ತಿರಸುಳಿಯಬೇಡಿರಿ' ಎಂಬ ಆಜ್ಞೆಯ ಅಭಿಸಂಬೋಧಿತರು ವ್ಯಕ್ತಿಗಳೂ ಆಗಿದ್ದಾರೆ ಮತ್ತು ಸಮಗ್ರವಾಗಿ ಸಮಾಜವೂ ಆಗಿರುತ್ತದೆ. ವ್ಯಕ್ತಿಗಳಿಗೆ ಈ ಆಜ್ಞೆಯ ಅರ್ಥವೇನೆಂದರೆ ಅವನು ವ್ಯಭಿಚಾರವೆಂಬ ಕಾರ್ಯದಿಂದ ದೂರವಿದ್ದರೆ ಸಾಲದು, ವ್ಯಭಿಚಾರದ ಮಾರ್ಗಕ್ಕೆ ಒಯ್ಯುವ ಸನ್ನಾಹಗಳಿಂದಲೂ ಅದರ ಪ್ರಾಥಮಿಕ ಪ್ರೇರಕಗಳಿಂದಲೂ ದೂರವಿರಬೇಕು. ಇನ್ನು ಈ ಆಜ್ಞೆಯ ಪ್ರಕಾರ ಸಾಮಾಜಿಕ ಜೀವನದಲ್ಲಿ ವ್ಯಭಿಚಾರದ, ಅದರ ಪ್ರೇರಕಗಳ ಮತ್ತು ವ್ಯಭಿಚಾರದ ಹೇತುಗಳ ದ್ವಾರವನ್ನೇ ಸಾಧ್ಯವಿದ್ದಷ್ಟು ಮುಚ್ಚಿಬಿಡಬೇಕಾದುದು ಸಮಾಜದ ಕರ್ತವ್ಯವಾಗಿದೆ.

ಇಬ್ನು ಅಬ್ಬಾಸ್‌ರಿಂದ ವರದಿಯಾದ ಒಂದು ಪ್ರವಾದಿ ವಚನ ಹೀಗಿದೆ, ನೀವು ನಿಮ್ಮ ಗುಪ್ತಾಂಗಗಳನ್ನು ರಕ್ಷಿಸಿರಿ, ವ್ಯಭಿಚಾರವಾಗದಂತೆ ನೋಡಿಕೊಳ್ಳಿರಿ. ಯಾರು ಮಾನ ಮರ್ಯಾದೆಯೊಂದಿಗೆ ಜೀವನ ಸಾಗಿಸುತ್ತಾರೋ ಅವರು ಸ್ವರ್ಗಕ್ಕೆ ಅರ್ಹರಾಗಿದ್ದಾರೆ.

ಇಂದು ವ್ಯಭಿಚಾರವು ಸಾರ್ವತ್ರಿಕವಾಗಿ ನಡೆಯುತ್ತಿರುವಂತಹ ಒಂದು ಸಮಾಜದಲ್ಲಿ ನಾವು ಬದುಕುತ್ತಿದ್ದೇವೆ. ಇದಕ್ಕೆ ಪುರುಷರ ವಿಕಾರ ಮತ್ತು ದುಷ್ಟ ಚಿಂತನೆ ಮಾತ್ರ ಕಾರಣವಲ್ಲ, ಬದಲಾಗಿ ನಾವು ಜೀವಿಸುವ ಸಮಾಜದಲ್ಲಿ ಸ್ತ್ರೀಯರ ವೇಷಭೂಷಣಗಳು, ಒನಪು ಒಯ್ಯಾರಗಳು, ಎಗ್ಗಿಲ್ಲದೇ ಅನುಕರಿಸುವ ಪಾಶ್ಚಾತ್ಯ ಸಂಸ್ಕೃತಿ, ಮುಕ್ತವಾಗಿ ಲಭ್ಯವಾಗುವ ಮದ್ಯ ಮತ್ತು ಲಹರಿ ಪದಾರ್ಥಗಳು, ಯಾವುದೇ ಸಂಕೋಚವಿಲ್ಲದೇ ಸಿನಿಮಾ ಟಾಕೀಸುಗಳಲ್ಲಿ ಹಾಗೂ ಟಿ.ವಿ. ಪರದೆಗಳಲ್ಲಿ ಹಗಲು ರಾತ್ರಿಯೆಂಬ ವ್ಯತ್ಯಾಸವಿಲ್ಲದೇ ಬಿತ್ತರಿಸುವ ನೀಲಿ ಚಿತ್ರಗಳು ಹಾಗೂ ಕಾಮೋದ್ರೇಕ ಅರೆನಗ್ನ ಚಿತ್ರಗಳು, ಯುವಕರ ಮಾಯಾಲೋಕವಾದ ಇಂಟರ್‌ನೆಟ್ ಹಾಗೂ ಸಾಮಾಜಿಕ ತಾಣಗಳು, ಸ್ತ್ರೀ-ಪುರುಷರೆಂಬ ಭೇದವಿಲ್ಲದ ಮುಕ್ತ ವಿದ್ಯಾಭ್ಯಾಸ, ಧಾರ್ಮಿಕ ಚಿಂತನೆಯ ಕೊರತೆ, ಇವುಗಳೆಲ್ಲವೂ ಒಂದು ಹಂತದಲ್ಲಿ ವ್ಯಭಿಚಾರದ ಹತ್ತಿರ ಸುಳಿಯಲು ಪ್ರೇರಕವಾಗಿವೆ.

ವ್ಯಭಿಚಾರವು ನೈತಿಕವಾಗಿ ಹೀನವಾಗಿರುವುದು, ಧಾರ್ಮಿಕವಾಗಿ ಪಾಪ ಕಾರ್ಯವಾಗಿರುವುದು ಮತ್ತು ಸಾಮಾಜಿಕವಾಗಿ ನಿಂದನೀಯ ಹಾಗೂ

ಆಕ್ಷೇಪಾರ್ಹವಾಗಿರುವುದರ ಬಗ್ಗೆ ಪ್ರಾಚೀನ ಕಾಲದಿಂದ ಇಂದಿನ ವರೆಗೂ ಎಲ್ಲಾ ಸಮಾಜಗಳೂ ಏಕಾಭಿಪ್ರಾಯ ಹೊಂದಿವೆ. ಈ ಕಾರಣದಿಂದಾಗಿಯೇ ಎಲ್ಲ ಕಾಲದ ಸಮಾಜಗಳು ವಿವಾಹ ಪದ್ಧತಿಯನ್ನು ರೂಢಿಯಲ್ಲಿರಿಸಿಕೊಳ್ಳುವುದರೊಂದಿಗೆ ವ್ಯಭಿಚಾರದ ದ್ವಾರವನ್ನು ಮುಚ್ಚುವ ಪ್ರಯತ್ನವನ್ನೂ ಒಂದಿಲ್ಲೊಂದು ರೀತಿಯಿಂದ ಮಾಡಿವೆ. ಆದರೆ ಈ ಪ್ರಯತ್ನಗಳ ಸ್ವರೂಪಗಳಲ್ಲಿ ಬೇರೆ ಬೇರೆ ಕಾನೂನುಗಳ ಮತ್ತು ನೈತಿಕ, ಸಾಂಸ್ಕೃತಿಕ, ಧಾರ್ಮಿಕ ವ್ಯವಸ್ಥೆಗಳ ನಡುವೆ ವ್ಯತ್ಯಾಸವಿತ್ತು.

ಮಾನವ ಪ್ರಕೃತಿಗೆ ಸಮೀಪವಾಗಿರುವ ಸಮಾಜದವರು ಯಾವಾಗಲೂ ವ್ಯಭಿಚಾರವನ್ನು ಸ್ವಯಂ ಒಂದು ಅಪರಾಧವೆಂದೇ ತಿಳಿದುಕೊಂಡರು. ಅದಕ್ಕೆ ಕಠಿಣ ಶಿಕ್ಷೆಗಳನ್ನು ನಿಶ್ಚಯಿಸಿದರು. ಆದರೆ ನಾಗರಿಕತೆಯು ಮಾನವ ಸಮಾಜವನ್ನು ಕೆಡಿಸುತ್ತಾ ಹೋದಂತೆಲ್ಲಾ ನೀತಿಯು ಮೃದುವಾಗುತ್ತಾ ಬಂತು. ಈ ವಿಷಯದಲ್ಲಿ ಸರ್ವಸಾಮಾನ್ಯವಾಗಿ ತೋರಲಾದ ಪ್ರಪ್ರಥಮ ಆಲಕ್ಷ್ಯ ಕೇವಲ ವ್ಯಭಿಚಾರ (Fornication) ಮತ್ತು ಪರಸ್ತ್ರೀಯೊಂದಿಗೆ ವ್ಯಭಿಚಾರ (Adultery) ಇವೆರಡರಲ್ಲಿ ತಾರತಮ್ಯ ಮಾಡಿದುದಾಗಿತ್ತು. ಮೊದಲಿನದು ಸಣ್ಣ ಮಟ್ಟದ ಅಪರಾಧವೆಂದೂ ಎರಡನೆಯದು ಶಿಕ್ಷಾರ್ಹ ಅಪರಾಧವೆಂದೂ ನಿಶ್ಚಯಿಸಿಕೊಳ್ಳಲಾಯಿತು. ಪ್ರಾಚೀನ ಈಜಿಪ್ಟ್, ಬೆಬಿಲೋನಿಯಾ ಮತ್ತು ಅಸೀರಿಯಾಗಳ ಕಾನೂನಿನ ಪ್ರಕಾರ ಕೇವಲ ವ್ಯಭಿಚಾರಕ್ಕಿದ್ದ ಶಿಕ್ಷೆ ಲಘುವಾಗಿತ್ತು. ಇದೇ ಕಾಯಿದೆಯನ್ನು ಗ್ರೀಕ್ ಮತ್ತು ರೋಮ್‌ಗಳು ಸ್ವೀಕರಿಸಿಕೊಂಡವು. ಇದರಿಂದಲೇ ಕೊನೆಗೆ ಯಹೂದಿಯರು ಪ್ರಭಾವಿತರಾದರು. ಬೈಬಲಿನಲ್ಲಿ ಇದೊಂದು ಸಣ್ಣ ತಪ್ಪಾಗಿದ್ದು ಪುರುಷನು ಪರಿಹಾರ ಧನ ಮಾತ್ರ ಕೊಡಬೇಕಾಗುತ್ತದೆ. (ವಿಮೋಚನಾ ಕಾಂಡ 22:16–17) ಪ್ರಾಚೀನ ಹಿಂದೂ ಕಾನೂನುಗಳ ಅವಸ್ಥೆಯು ಬಹುತೇಕ ಹೀಗೆಯೇ ಇದೆ. (ಮನು ಧರ್ಮಶಾಸ್ತ್ರ ಅಧ್ಯಾಯ 8 ಶ್ಲೋಕ 365–366). ಇಸ್ಲಾಮೀ ಕಾನೂನು ಇವೆಲ್ಲ ವಿಚಾರಗಳಿಗೆ ವ್ಯತಿರಿಕ್ತವಾಗಿ ವ್ಯಭಿಚಾರವನ್ನು ಸ್ವಯಂ ಒಂದು ಶಿಕ್ಷಾರ್ಹ ಅಪರಾಧವೆಂದು ಸಾರುತ್ತದೆ.

ಇಸ್ಲಾಮ್ ಮಾನವ ಸಮಾಜವನ್ನು ವ್ಯಭಿಚಾರದ ಗಂಡಾಂತರದಿಂದ ಕಾಪಾಡಲಿಕ್ಕಾಗಿ ತನ್ನ ದಂಡ ಸಂಹಿತೆಯೆಂಬ ಅಸ್ತ್ರವನ್ನು ಮಾತ್ರ ಅವಲಂಬಿಸಿಕೊಂಡಿರುವ ಬದಲು ಅದಕ್ಕಾಗಿ ವ್ಯಾಪಕ ಪ್ರಮಾಣದ ಸುಧಾರಣಾತ್ಮಕ ಹಾಗೂ ನಿರೋಧಾತ್ಮಕ ಕ್ರಮವನ್ನು ಪ್ರಯೋಗಿಸುತ್ತದೆ. ಈ ಶಿಕ್ಷಾ ಕಾನೂನನ್ನು ಅದು ಕೊನೆಯ ಅಸ್ತ್ರದ ರೂಪದಲ್ಲಿ ಇರಿಸಿಕೊಂಡಿದೆ. ಈ ಕಾನೂನುಪರ ಕ್ರಮವನ್ನು ನಿಶ್ಚಯಿಸುವುದಕ್ಕೆ ಮುಂಚೆ ಸ್ತ್ರೀ–ಪುರುಷರು ಬೆರೆಯುವುದನ್ನು ನಿಲ್ಲಿಸಲಾಯ್ತು. ಶೃಂಗಾರದೊಂದಿಗೆ ಸ್ತ್ರೀ ಹೊರಬರುವುದನ್ನು ತಡೆಯಲಾಯ್ತು. ವ್ಯಭಿಚಾರಕ್ಕೆ ಅವಕಾಶ ಮತ್ತು ಸೌಲಭ್ಯ ಕೊಡುವಂತಹ ಎಲ್ಲ ಸಾಧನಗಳ ದ್ವಾರವನ್ನು ಮುಚ್ಚಿಬಿಡಲಾಯ್ತು.

□□□

# 26. ಜಿಪುಣತೆ ತೋರಬೇಡಿರಿ

''ಸ್ವತಃ ಜಿಪುಣತೆ ತೋರುವವರನ್ನೂ ಇತರರನ್ನು ಜಿಪುಣತೆಗೆ ಪ್ರೇರೇಪಿಸುವವರನ್ನೂ ಅಲ್ಲಾಹನು ತನ್ನ ಅನುಗ್ರಹದಿಂದ ತಮಗೆ ದಯಪಾಲಿಸಿದುದನ್ನು ಬಚ್ಚಿಡುವವರನ್ನೂ ಅಲ್ಲಾಹನು ಮೆಚ್ಚುವುದಿಲ್ಲ...'' (ಪವಿತ್ರ ಕುರ್‌ಆನ್,4:37)

## ಟಿಪ್ಪಣಿ

ಅರ್ಥಾತ್, ಅಲ್ಲಾಹನ ಅನುಗ್ರಹವನ್ನು ಬಚ್ಚಿಡುವುದೆಂದರೆ, ಅಲ್ಲಾಹನು ಅವನ ಮೇಲೆ ಅನುಗ್ರಹ ತೋರಲೇ ಇಲ್ಲವೋ ಎಂಬಂತೆ ಇರುವುದು. ಉದಾ: ಅಲ್ಲಾಹನು ಸಂಪತ್ತನ್ನು ದಯಪಾಲಿಸಿದ್ದರೂ ತನ್ನ ಸ್ಥಿತಿಗತಿಗಳಿಗಿಂತ ಕೀಳು ಮಟ್ಟದಲ್ಲಿರುವುದು, ತನಗಾಗಲಿ, ತನ್ನ ಕುಟುಂಬದವರಿಗಾಗಲಿ ಹಣ ಖರ್ಚು ಮಾಡದಿರುವುದು, ಇತರರಿಗೆ ಸಹಾಯ ನೀಡದಿರುವುದು. ಸತ್ಕಾರ್ಯಗಳಲ್ಲಿ ಭಾಗವಹಿಸದಿರುವುದು. ಅವನನ್ನು ಯಾರಾದರೂ ಕಂಡಾಗ ಅಯ್ಯೋ ಪಾಪ! ಇವನು ಕಡು ಬಡವನಾಗಿದ್ದಾನೆ ಎನ್ನುವಂತೆ ಇರುವುದು. ಇದು ವಾಸ್ತವದಲ್ಲಿ ಅಲ್ಲಾಹನಿಗೆ ತೋರುವ ಕೃತಘ್ನತೆಯಾಗಿರುತ್ತದೆ. ಅಲ್ಲಾಹನು ತನ್ನ ದಾಸನೊಬ್ಬನಿಗೆ ಸಂಪನ್ನತೆ ಪ್ರದಾನ ಮಾಡಿದಾಗ ಆ ಸಂಪನ್ನತೆಯು ಅವನಲ್ಲಿ ತೋರಿ ಬರಬೇಕು. ಅರ್ಥಾತ್, ಆಹಾರ, ವಾಸಸ್ಥಾನ, ಉಡುಗೆ ತೊಡುಗೆ, ದಾನಧರ್ಮ ಇವೆಲ್ಲವುಗಳಿಂದಲೂ ಸಂಪನ್ನತೆಯು ತೋರಿ ಬರುವಂತಿರಬೇಕು.



# 27. ಕುಟುಂಬ ಸಂಬಂಧವನ್ನು ಜೋಡಿಸಿರಿ, ಮುರಿಯಬೇಡಿರಿ

''ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ.'' (ಪವಿತ್ರ ಕುರ್‌ಆನ್,30:21)

''...ಅವರು ನಿಮಗೆ ಉಡುಪಾಗಿರುವರು ಮತ್ತು ನೀವು ಅವರಿಗೆ ಉಡುಪಾಗಿರುವಿರಿ[1]...'' (ಪವಿತ್ರ ಕುರ್‌ಆನ್,2:187)

''...ನೀವು ಅವರೊಂದಿಗೆ ಉತ್ತಮ ರೀತಿಯಿಂದ ಜೀವನ ನಡೆಸಿರಿ. ಅವರು ನಿಮಗೆ ಅಪ್ರಿಯರಾಗಿದ್ದರೆ, ಒಂದು ವಸ್ತುವು ನಿಮಗೆ ಅಪ್ರಿಯವಾಗಿದ್ದರೂ ಅಲ್ಲಾಹನು ಅದರಲ್ಲೇ ಅತಿ ಹೆಚ್ಚು ಒಳಿತನ್ನಿರಿಸಿರಲೂಬಹುದು.[2]'' (ಪವಿತ್ರ ಕುರ್‌ಆನ್,4:19)

''ಅಲ್ಲಾಹನು ಯಾವ ಯಾವ ಸಂಬಂಧಗಳನ್ನು ಕಾಪಾಡಲು ಆಜ್ಞೆ ಕೊಟ್ಟಿರುವನೋ ಅವುಗಳನ್ನು ಕಾಪಾಡಿಕೊಳ್ಳುತ್ತಾರೆ[3]...'' (ಪವಿತ್ರ ಕುರ್‌ಆನ್,13:21)

''ಸತ್ಯವಿಶ್ವಾಸಿಗಳಂತು ಪರಸ್ಪರ ಸಹೋದರರು. ಆದುದರಿಂದ ನಿಮ್ಮ ಸಹೋದರರ ನಡುವೆ ಸಂಬಂಧಗಳನ್ನು ಸರಿಪಡಿಸಿರಿ...'' (ಪವಿತ್ರ ಕುರ್‌ಆನ್,49:10)

''...ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವನ್ನಿರಿಸಿ ಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ...''

(ಪವಿತ್ರ ಕುರ್‌ಆನ್,4:1)

## ಟಿಪ್ಪಣಿ:

ವೈವಾಹಿಕ ಸಂಬಂಧವು ವಾಸ್ತವದಲ್ಲಿ ನಾಗರಿಕತೆಯ ಮೂಲವಾಗಿದೆ. ನಾಗರಿಕತೆಯ ಉನ್ನತಿಯು ಪತಿ–ಪತ್ನಿಯರ ಸಂಬಂಧವನ್ನು ಅವಲಂಬಿಸಿದೆ. ಹಾಗೆಯೇ ಅದರ ಅವನತಿಯು ಈ ಸಂಬಂಧದ ಶಿಥಿಲತೆಯನ್ನು ಅವಲಂಬಿಸಿದೆ. ವ್ಯಕ್ತಿಯ ಹಾಗೂ ಸಮಾಜದ ಸ್ಥಿರತೆಯು ಈ ಸುಂದರ ವೃಕ್ಷದ ಸ್ಥಿರತೆಯನ್ನು ಅವಲಂಬಿಸಿರುವಾಗ ಅದಕ್ಕೇ ಆಘಾತ ಮಾಡುವಾತನು ಮಹಾ ನೀಚನಾಗಿರುತ್ತಾನೆ.

ಒಂದು ಪ್ರವಾದಿ ವಚನದಲ್ಲಿ ಈ ರೀತಿ ಇದೆ-, ಶೈತಾನನು ತನ್ನ ಕೇಂದ್ರ ಸ್ಥಾನದಿಂದ ಭೂಮಿಯ ಮೂಲೆಮೂಲೆಗಳಿಗೂ ತನ್ನ ಏಜಂಟರನ್ನು ಕಳುಹಿಸುತ್ತಾನೆ. ಅವರು ಹಿಂತಿರುಗಿ ಬಂದು ತಮ್ಮ ತಮ್ಮ ಕೆಲಸಗಳ ವರದಿ ಒಪ್ಪಿಸುತ್ತಾರೆ. ಒಬ್ಬನು ತಾನು ಮಾಡಿಸಿದ ಕ್ಷೋಭೆಗಳ ವರದಿ ಕೊಡುವಾಗ ಇನ್ನೊಬ್ಬನು ತಾನು ಮಾಡಿಸಿದ ದೌರ್ಜನ್ಯಗಳ ವಿವರ ಕೊಡುತ್ತಾನೆ. ಆದರೆ ಇಬ್ಲೀಸ್ ಪ್ರತಿಯೊಬ್ಬನೊಡನೆ ನೀನೇನೂ ಮಾಡಿಲ್ಲವೆನ್ನುತ್ತಾನೆ. ಆಗ ಮತ್ತೊಬ್ಬ ಏಜೆಂಟನು ಬಂದು ''ನಾನು ಒಂದು ದಂಪತಿಗಳ ಮಧ್ಯೆ ವಿರಸವನ್ನು ಮಾಡಿಸಿ ಬಂದೆ'' ಎನ್ನುತ್ತಾನೆ. ಇಬ್ಲೀಸ್ ಇದನ್ನು ಕೇಳಿದೊಡನೆ ಆ ಏಜೆಂಟನನ್ನು ಅಪ್ಪಿಕೊಂಡು ನೀನು ನಿಜಕ್ಕೂ ಒಳ್ಳೆಯ ಕೆಲಸ ಮಾಡಿ ಬಂದಿರುವಿ ಎನ್ನುತ್ತಾನೆ.

1. ದೇಹ ಮತ್ತು ಉಡುಪಿನ ಮಧ್ಯೆ ಬೇರೇನೂ ಮರೆಯಿಲ್ಲದಿದ್ದು ಅವೆರಡರೊಳಗಿನ ಸಂಬಂಧ ಸಾಮೀಪ್ಯಗಳು ಅಭೇದ್ಯವಾಗಿರುವಂತೆಯೇ ನಿಮ್ಮ ಮತ್ತು ಪತ್ನಿಯರೊಳಗಿನ ಸಂಬಂಧವೂ ಅಭೇದ್ಯವಾಗಿರುತ್ತದೆ.

2. ಅರ್ಥಾತ್, ಸ್ತ್ರೀಯು ರೂಪವತಿಯಾಗಿಲ್ಲದಿದ್ದರೆ ಅಥವಾ ಅವಳಲ್ಲಿರುವ ಯಾವುದಾದರೊಂದು ನ್ಯೂನತೆಯಿಂದಾಗಿ ಪತಿಗೆ ಅವಳ ಮೇಲೆ ಇಷ್ಟವಿಲ್ಲದಿದ್ದರೆ ಅವನು ಕೂಡಲೇ ಬೇಸರಗೊಂಡು ಅವಳನ್ನು ಬಿಟ್ಟು ಬಿಡಲು ಸನ್ನದ್ಧವಾಗಬಾರದು. ಅವನು ಸಾಧ್ಯವಿದ್ದಷ್ಟು ಸಹನೆಯಿಂದ ವರ್ತಿಸಬೇಕು. ಹೆಚ್ಚಾಗಿ ಒಬ್ಬ ಸ್ತ್ರೀಯು ರೂಪವತಿಯಾಗಿರದಿದ್ದರೂ ಅವಳಲ್ಲಿ ದಾಂಪತ್ಯ ಜೀವನಕ್ಕೆ ಸೌಂದರ್ಯಕ್ಕಿಂತಲೂ ಹೆಚ್ಚು ಮಹತ್ವವುಳ್ಳ ಕೆಲವು ಗುಣವಿಶೇಷಗಳಿರುತ್ತವೆ. ಅವಳಿಗೆ ತನ್ನಲ್ಲಿರುವ ಆ ವಿಶೇಷತೆಗಳನ್ನು ಪ್ರಕಟಿಸುವ ಅವಕಾಶ ದೊರೆತರೆ, ಅವಳು ರೂಪವತಿಯಾಗಿಲ್ಲವೆಂದು ಬೇಸರಿಸುತ್ತಿದ್ದ ಆ ಪತಿಯೇ ಅವಳ ಚಾರಿತ್ರ್ಯಕ್ಕೆ ಮರುಳಾಗಿ ಬಿಡುತ್ತಾನೆ. ಇದೇ ರೀತಿಯಲ್ಲಿ ಅನೇಕ ವೇಳೆ ದಾಂಪತ್ಯ ಜೀವನದ ಆರಂಭದಲ್ಲಿ ಸ್ತ್ರೀಯ ಕೆಲವು ವಿಷಯಗಳು ಪತಿಗೆ ಅಪ್ರಿಯವೆನಿಸುತ್ತದೆ. ಇದರಿಂದ ಅವನು ತಳಮಳಗೊಳ್ಳುತ್ತಾನೆ. ಆದರೆ ಅವನು ಸಹನೆಯಿಂದಿದ್ದು ಸ್ತ್ರೀಯ ಎಲ್ಲಾ ಅರ್ಹತೆಗಳು ಕಾರ್ಯರೂಪಕ್ಕೆ ಬರಲು ಅವಕಾಶಕೊಟ್ಟಾಗ ಅವನ ಪತ್ನಿಯು ದೋಷಗಳಿಗಿಂತಲೂ ಹೆಚ್ಚು ಉತ್ತಮ ಗುಣಗಳನ್ನು ಹೊಂದಿದವಳಾಗಿರುತ್ತಾಳೆ. ಆದುದರಿಂದ ವಿವಾಹ ಸಂಬಂಧವನ್ನು ಮುರಿದು ಬಿಡುವುದರಲ್ಲಿ ಅವಸರ ಪಡುವುದು ಎಷ್ಟು ಮಾತ್ರಕ್ಕೂ ಸರಿಯಲ್ಲ.

3. ಅರ್ಥಾತ್, ಮಾನವನ ಸಾಮೂಹಿಕ ಜೀವನದ ವಿಜಯವು ಯಾವ ಸಾಮಾಜಿಕ ಮತ್ತು ನಾಗರಿಕ ಸಂಬಂಧಗಳ ಆರೋಗ್ಯವನ್ನು ಅವಲಂಬಿಸಿದೆಯೋ ಆ ಸಂಬಂಧಗಳು ಇದರಲ್ಲಿ ಸೇರಿವೆ.

4. ಈ ಸೂಕ್ತವು ಜಗತ್ತಿನ ಸಕಲ ಮುಸ್ಲಿಮರ ಮಧ್ಯೆ ವಿಶ್ವಮಟ್ಟದ ಒಂದು ಭ್ರಾತೃತ್ವವನ್ನು ಸ್ಥಾಪಿಸುತ್ತದೆ. ಲೋಕದ ಬೇರಾವುದೇ ಮತ ಅಥವಾ ಧರ್ಮದ ಅನುಯಾಯಿಗಳಲ್ಲಿ ಮುಸ್ಲಿಮರಲ್ಲಿರುವಂತಹ ಸಹೋದರ ಭಾವವಿಲ್ಲ.

❑❑❑

# 28. ಉತ್ತಮವಾದುದನ್ನೇ ತಿನ್ನಿರಿ ಮತ್ತು ಕುಡಿಯಿರಿ

''ಹೇ ಜನರೇ, ಭೂಮಿಯಲ್ಲಿರುವ ಧರ್ಮಸಮ್ಮತ ಹಾಗೂ ಶುದ್ಧ ವಸ್ತುಗಳನ್ನು ನೀವು ಉಣ್ಣಿರಿ. ಶೈತಾನನು ತೋರಿಸಿದ ಹಾದಿಗಳಲ್ಲಿ ನಡೆಯಬೇಡಿರಿ. ಅವನು ನಿಮ್ಮ ಪ್ರತ್ಯಕ್ಷ ಶತ್ರು. ಅವನು ನಿಮಗೆ ಪಾಪಕಾರ್ಯ ಮತ್ತು ಅಶ್ಲೀಲತೆಗಳ ಅಪ್ಪಣೆ ಕೊಟ್ಟು, ಅದು ಅಲ್ಲಾಹನ ಆದೇಶವೆಂದು ನಿಮಗೆ ತಿಳಿದಿಲ್ಲವಾದರೂ ಅಲ್ಲಾಹನ ಹೆಸರಿಂದ ನೀವು ಅದನ್ನು ಹೇಳಿರೆಂದು ಬೋಧಿಸುತ್ತಾನೆ.'' (ಪವಿತ್ರ ಕುರ್‌ಆನ್,2:168,169)

''ಓ ಸತ್ಯವಿಶ್ವಾಸಿಗಳೇ, ಅಲ್ಲಾಹನು ನಿಮಗೆ 'ಧರ್ಮಸಮ್ಮತ' ಗೊಳಿಸಿರುವ ಶುದ್ಧ ವಸ್ತುಗಳನ್ನು 'ನಿಷಿದ್ಧ' ಮಾಡಿಕೊಳ್ಳಬೇಡಿರಿ ಮತ್ತು ಹದಮೀರಬೇಡಿರಿ. ಅಲ್ಲಾಹನಿಗೆ, ಅತಿರೇಕವೆಸಗುವವರು ಎಷ್ಟು ಮಾತ್ರಕ್ಕೂ ಮೆಚ್ಚುಗೆಯವರಲ್ಲ. ಅಲ್ಲಾಹನು ನಿಮಗೆ ನೀಡಿರುವ 'ಧರ್ಮಸಮ್ಮತ' ಮತ್ತು ಶುದ್ಧ ಆಹಾರವನ್ನು ಉಣ್ಣಿರಿ, ಕುಡಿಯಿರಿ...''

(ಪವಿತ್ರ ಕುರ್‌ಆನ್,5:87,88)

## ಟಿಪ್ಪಣಿ:

1. ಅರ್ಥಾತ್, ಈ ಸೂಕ್ತದಲ್ಲಿ ಎರಡು ವಿಧಗಳಿವೆ.

i. ನೀವು ಸ್ವತಃ ಹಲಾಲ್ ಮತ್ತು ಹರಾಮ್‌ಗಳನ್ನು ನಿರ್ಣಯಿಸುವವರಾಗಬೇಡಿರಿ. ಅಲ್ಲಾಹ್ ಹಲಾಲ್ ಮಾಡಿದುದೇ ಹಲಾಲ್ ಮತ್ತು ಹರಾಮ್ ಮಾಡಿದುದೇ ಹರಾಮ್ ಆಗಿದೆ. ನಿಮ್ಮಿಚ್ಛೆಯಿಂದ ಯಾವುದಾದರೂ ಹಲಾಲನ್ನು ಹರಾಮ್ ಮಾಡಿಕೊಂಡರೆ ನೀವು ದೇವ ನಿಯಮದ ಬದಲಿಗೆ ಸ್ವೇಚ್ಛಾ ನಿಯಮದ ಅಧೀನರಾದಂತಾಗುವುದು.

ii. ಕ್ರೈಸ್ತ ಪಾದ್ರಿ, ಹಿಂದೂ ಸನ್ಯಾಸಿ, ಬೌದ್ಧ ಭಿಕ್ಷುಗಳು ಮತ್ತು ಸೂಫಿಗಳಂತೆ ವೈರಾಗ್ಯ ಮತ್ತು ಸುಖ ತ್ಯಾಗದ ಮಾರ್ಗವನ್ನು ಅನುಸರಿಸಬೇಡಿರಿ. ಇಂದ್ರಿಯ ಸುಖ ಹಾಗೂ ಶಾರೀರಿಕ ಬೇಡಿಕೆಗಳ ಹಕ್ಕನ್ನು ಪೂರೈಸುವುದು ಆಧ್ಯಾತ್ಮಿಕತೆಯನ್ನು ತಡೆಯುವ ಸಾಧನವೆಂಬುದು ಸಾಮಾನ್ಯವಾಗಿ ಧಾರ್ಮಿಕ ಮನೋವೃತ್ತಿಯವರ ಭಾವನೆಯಾಗಿರುತ್ತದೆ. ತನ್ನನ್ನು ತಾನೇ ದಂಡಿಸಿಕೊಳ್ಳುವುದು, ಇಂದ್ರಿಯ ಸುಖಗಳಿಂದ ವಂಚಿತಗೊಳಿಸಿಕೊಳ್ಳುವುದು ಮತ್ತು ಲೌಕಿಕ ಸಾಧನಾನುಕೂಲತೆಗಳೊಂದಿಗೆ ತನಗಿರುವ ಸಂಬಂಧವನ್ನು ಕಡಿದುಕೊಳ್ಳುವುದು ಪುಣ್ಯಕಾರ್ಯಗಳೆಂದೂ ದೇವ ಸಾಮೀಪ್ಯವು ಇದರ ಹೊರತು ಲಭ್ಯವಾಗದೆಂದೂ ಅವರ

ಊಹೆ. ಇಂತಹ ಮನೋಭಾವವುಳ್ಳ ಕೆಲವರು ಪ್ರವಾದಿಯ ಶಿಷ್ಯರ ಮಧ್ಯೆಯೂ ಇದ್ದರು. ಒಮ್ಮೆ ಕೆಲವು ಅನುಚರರು ನಾವು ದಿನಂಪ್ರತಿ ಉಪವಾಸವನ್ನಾಚರಿಸುವೆವು, ನಿತ್ಯ ರಾತ್ರಿ ಸ್ವಲ್ಪವೂ ಮಲಗದೆ ದೇವಾರಾಧನೆ ಮಾಡುವೆವು, ಮಾಂಸ ಕೊಬ್ಬು ಹಾಗೂ ತೈಲ ಪದಾರ್ಥಗಳನ್ನು ವರ್ಜಿಸುವೆವು ಮತ್ತು ಸ್ತ್ರೀಸಂಸರ್ಗ ಮಾಡಲಾರೆವೆಂದು ಪ್ರತಿಜ್ಞೆ ಮಾಡಿದ್ದಾರೆಂಬ ಸುದ್ದಿ ಪ್ರವಾದಿಯವರಿಗೆ(ಸ) ಸಿಕ್ಕಿತು. ಆಗ ಪ್ರವಾದಿಯವರು(ಸ) ಒಂದು ಉಪನ್ಯಾಸ ನೀಡುತ್ತಾ ''ನನಗೆ ಇಂತಹ ವಿಷಯಗಳ ಆಜ್ಞೆ ಕೊಡಲಾಗಿಲ್ಲ, ನಿಮ್ಮ ಮೇಲೆ ನಿಮ್ಮ ದೇಹದ ಹಕ್ಕುಗಳೂ ಇವೆ. ಉಪವಾಸ ವ್ರತವನ್ನೂ ಆಚರಿಸಿರಿ, ಆಹಾರ ಸೇವಿಸುತ್ತಲೂ ಇರಿ. ರಾತ್ರಿ ದೇವಾರಾಧನೆಗೂ ನಿಲ್ಲಿರಿ ಮತ್ತು ಮಲಗಿ ವಿಶ್ರಾಂತಿಯನ್ನೂ ಪಡೆಯಿರಿ, ನನ್ನನ್ನು ನೋಡಿರಿ, ನಾನು ಮಲಗಿ ನಿದ್ರಿಸುತ್ತಲೂ ಇರುತ್ತೇನೆ, ಎದ್ದು ಆರಾಧನೆ ಮಾಡುತ್ತಲೂ ಇರುತ್ತೇನೆ. ಉಪವಾಸ ವ್ರತವನ್ನೂ ಆಚರಿಸುತ್ತೇನೆ, ಉಪವಾಸವಿಲ್ಲದೆಯೂ ಇರುತ್ತೇನೆ. ಮಾಂಸವನ್ನೂ ತಿನ್ನುತ್ತೇನೆ, ತುಪ್ಪವನ್ನೂ ಸೇವಿಸುತ್ತೇನೆ. ಆದ್ದರಿಂದ ಯಾರು ನನ್ನ ಕ್ರಮವನ್ನು ಮೆಚ್ಚುವುದಿಲ್ಲವೋ ಅವರು ನನ್ನವರಲ್ಲ'' ಎಂದರು. ಅನಂತರ, ''ಜನರು ಸ್ತ್ರೀಯರನ್ನೂ ಉತ್ತಮ ಆಹಾರವನ್ನೂ ಸುಗಂಧ ದ್ರವ್ಯ, ನಿದ್ರೆ ಹಾಗೂ ಲೌಕಿಕ ಸುಖಭೋಗಗಳನ್ನು ತಮಗೆ ನಿಷಿದ್ಧಗೊಳಿಸಿಕೊಳ್ಳಬೇಕಾದರೆ ಇವರಿಗೆ ಏನಾಗಿದೆ? ನಾನು ನಿಮಗೆ ಸನ್ಯಾಸಿಯಾಗಿರಿ, ಪಾದ್ರಿಗಳಾಗಿರಿ ಎಂಬಂತಹ ಬೋಧನೆ ನೀಡಿಲ್ಲ, ನನ್ನ ಧರ್ಮದಲ್ಲಿ ಸ್ತ್ರೀಯರನ್ನೂ, ಮಾಂಸವನ್ನೂ ವರ್ಜಿಸಬೇಕೆಂದಿಲ್ಲ, ಏಕಾಂತವಾಸ ಮತ್ತು ಸನ್ಯಾಸ ಇದರಲ್ಲಿಲ್ಲ, ಇಂದ್ರಿಯ ನಿಗ್ರಹಕ್ಕೆ ನನ್ನಲ್ಲಿ ಉಪವಾಸ ವ್ರತವಿದೆ. ನಿಮಗಿಂತ ಮುಂಚಿನವರು ತಮ್ಮನ್ನು ತಾವೇ ದಂಡಿಸಿಕೊಂಡುದರಿಂದಾಗಿ ಅಲ್ಲಾಹನು ಅವರ ಮೇಲೆ ಕಷ್ಟಗಳನ್ನೆರಗಿಸಿದನು. ಆದುದರಿಂದಲೇ ಅವರು ನಾಶ ಹೊಂದಿದರು. ಈಗ ನಿಮಗೆ ಆಶ್ರಮಗಳಲ್ಲೂ, ಮಠಗಳಲ್ಲೂ ಕಂಡುಬರುತ್ತಿರುವುದು ಇದರ ಪಳೆಯುಳಿಕೆಗಳೇ ಆಗಿವೆ'' ಎಂದರು. ಇದಕ್ಕೆ ಸಂಬಂಧಿಸಿದ ಕೆಲವು ವರದಿಗಳಲ್ಲಿ, ''ಓರ್ವ ಸಹಾಬಿ ದೀರ್ಘ ಕಾಲದಿಂದ ತನ್ನ ಪತ್ನಿಯ ಬಳಿಗೆ ಹೋಗದೆ ಹಗಲೂ ಇರುಳೂ ದೇವಾರಾಧನೆಯಲ್ಲೇ ಮಗ್ನರಾಗಿದ್ದಾರೆಂದು ಪ್ರವಾದಿಯವರು(ಸ) ತಿಳಿದಾಗ ಅವರನ್ನು ಕರೆಸಿ, ಈಗಲೇ ನಿಮ್ಮ ಪತ್ನಿಯ ಬಳಿಗೆ ಹೋಗಬೇಕೆಂದು ಅಪ್ಪಣೆ ಕೊಟ್ಟರು. ಆಗ ಅವರು ನಾನು ಉಪವಾಸ ವ್ರತದಲ್ಲಿದ್ದೇನೆಂದರು. ಆಗ ಪ್ರವಾದಿಯವರು(ಸ) ವ್ರತವನ್ನು ಮುರಿಯಿರಿ ಮತ್ತು ಹೋಗಿರಿ ಎಂದು ಹೇಳಿದರು.

ಉಮರ್‌ರವರ(ರ) ಕಾಲದಲ್ಲಿ ಓರ್ವ ಮಹಿಳೆಯು ಬಂದು ''ನನ್ನ ಪತಿ ದಿನವಿಡೀ ಉಪವಾಸ ವ್ರತದಲ್ಲಿರುತ್ತಾರೆ ಮತ್ತು ರಾತ್ರಿಯಿಡೀ ದೇವಾರಾಧನೆ ಮಾಡುತ್ತಾರೆ, ನನ್ನೊಂದಿಗೆ ಸಂಪರ್ಕವಿರಿಸುವುದಿಲ್ಲ'' ಎಂದು ದೂರುಕೊಟ್ಟಳು. ಹ. ಉಮರ್‌ರವರು(ರ) ಅಂದಿನ ಪ್ರಸಿದ್ಧ ಮಹಾನರಾದ ಕಅಬ್ ಬಿನ್ ಸೌರುಲ್ ಅಝ್ದೀರನ್ನು(ರ) ಈ ಮೊಕದ್ದಮೆಯ ವಿಚಾರಣೆಗಾಗಿ ನೇಮಕ ಮಾಡಿದರು. ಅವರು ಆ ಸ್ತ್ರೀಯ ಗಂಡನು ಮೂರು ರಾತ್ರಿಗಳಲ್ಲಿ ಎಷ್ಟು ಬೇಕಾದರೂ ದೇವಾರಾಧನೆ

ಮಾಡಿಕೊಳ್ಳಲಿ. ಆದರೆ ನಾಲ್ಕನೆಯ ರಾತ್ರಿಯು ಖಂಡಿತವಾಗಿಯೂ ಆ ಸ್ತ್ರೀಯ ಹಕ್ಕಾಗಿರುತ್ತದೆಂದು ತೀರ್ಪುಕೊಟ್ಟರು.

2. ಇಲ್ಲಿ ಹದಮೀರುವುದು ಎಂಬುದು ವಿಶಾಲಾರ್ಥವನ್ನು ಹೊಂದಿದೆ. ಹಲಾಲನ್ನು(ಅನುವದನೀಯ) ಹರಾಮನ್ನಾಗಿ(ನಿಷಿದ್ಧ) ಮಾಡುವುದು, ಅಲ್ಲಾಹನು ಯಾವುದನ್ನು ಶುದ್ಧವೆಂದಿರುವನೋ ಅವುಗಳನ್ನು ನಿಷಿದ್ಧ ವಸ್ತುಗಳ ಹಾಗೆ ವರ್ಜಿಸುವುದು, ಇವು ಸ್ವಯಂ ಅತಿರೇಕ ಕಾರ್ಯಗಳು. ಆದೇ ರೀತಿ ಶುದ್ಧ ವಸ್ತುಗಳನ್ನು ಉಪಯೋಗಿಸುವಲ್ಲಿ ಅನೀತಿ ಮತ್ತು ಮಿತಿ ಮೀರುವುದೂ ಅತಿರೇಕವೆ.

ಸಂದೇಶವಾಹಕರುಗಳೇ! ಶುದ್ಧ ವಸ್ತುಗಳನ್ನು ಉಣ್ಣಿರಿ ಮತ್ತು ಸತ್ಕರ್ಮಗಳನ್ನು ಮಾಡಿರಿ (ಪವಿತ್ರ ಕುರ್‌ಆನ್,23:51)

1. ಇಲ್ಲಿ ಸಂದೇಶವಾಹಕರುಗಳೇ ಎಂದರೆ, ಅರ್ಥಾತ್ ಸಕಲ ಪ್ರವಾದಿಗಳನ್ನು ಅಭಿಸಂಬೋಧಿಸಿ ಹೇಳಲಾಗಿದೆ. ಸಕಲ ಪ್ರವಾದಿಗಳನ್ನು ಕರೆಯುವ ಉದ್ದೇಶ ಎಲ್ಲ ಕಾಲ, ಜನಾಂಗ ಮತ್ತು ದೇಶಗಳಲ್ಲಿ ಬರುತ್ತಿದ್ದ ಪ್ರವಾದಿಗಳಿಗೆ ಇದೇ ಆದೇಶ ಮತ್ತು ಮಾರ್ಗದರ್ಶನ ನೀಡಲಾಗಿತ್ತು. ಅವರೆಲ್ಲರೂ ಕಾಲ ಮತ್ತು ಸ್ಥಾನಗಳ ಭೇದವಿದ್ದೂ ಒಂದೇ ಆದೇಶ ಪಡೆದಿದ್ದರು.

2. ಇಲ್ಲಿ ಶುದ್ಧ ವಸ್ತುಗಳು ಎಂದರೆ ವಸ್ತುತಃ ಶುದ್ಧವಾಗಿರುವ ಮತ್ತು ಹಲಾಲ್ (ಧರ್ಮಸಮ್ಮತ) ರೀತಿಯಿಂದ ಗಳಿಸಿದ ವಸ್ತುಗಳು. ಶುದ್ಧ ವಸ್ತುಗಳನ್ನು ತಿನ್ನಲು ಆದೇಶಿಸುವ ಮೂಲಕ ಸನ್ಯಾಸ ಮತ್ತು ಲೌಕಿಕ ವ್ಯಾಮೋಹಗಳ ನಡುವೆ ಇರುವ ಇಸ್ಲಾಮಿನ ಸಂತುಲಿತ ಮಾರ್ಗದ ಕಡೆಗೆ ಸೂಚನೆ ನೀಡಲಾಗಿದೆ. ಮುಸ್ಲಿಮನು ಸನ್ಯಾಸಿಯಂತೆ ತನ್ನನ್ನು ತಾನೇ ಶುದ್ಧ ವಸ್ತುಗಳಿಂದ ವಂಚಿತಗೊಳಿಸುವುದಿಲ್ಲ, ಆದೇ ರೀತಿ ಲೋಕಾರಾಧಕನಂತೆ ಹಲಾಲ್ (ಧರ್ಮಸಮ್ಮತ) ಮತ್ತು ಹರಾಮ್(ನಿಷಿದ್ಧ) ಎಂದು ನೋಡದೆ ಸಿಕ್ಕಿದ್ದನ್ನೆಲ್ಲ ಕಬಳಿಸಿ ಕೊಳ್ಳುವುದೂ ಇಲ್ಲ. ಸತ್ಕರ್ಮಗಳನ್ನು ಆದೇಶಿಸುವ ಮುನ್ನ ಶುದ್ಧ ವಸ್ತುಗಳನ್ನು ತಿನ್ನಬೇಕೆಂದು ಆದೇಶಿಸಿರುವುದರ ಹಿಂದೆ ಹರಾಮ್ ವಸ್ತುಗಳನ್ನು ತಿನ್ನುತ್ತಾ ಸತ್ಕರ್ಮಗಳನ್ನು ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲ ಎಂಬ ಸೂಚನೆ ಅಡಕವಾಗಿದೆ. ಮನುಷ್ಯನು ಹಲಾಲ್ ವಸ್ತುಗಳನ್ನು ತಿನ್ನುವವನಾಗಿರಬೇಕೆಂಬುದು ಪುಣ್ಯ ಕಾರ್ಯಕ್ಕೆ ಇರುವ ಪ್ರಥಮ ನಿಬಂಧನೆಯಾಗಿದೆ.

